ಪೌರಾಣಿಕ ಗ್ರಂಥಮಾಲಾ.

ಪುಷ್ಪ ೧.

# ಆಸ್ತೀಕಾಖ್ಯಾನ.




ಲೇಖಕ :—

**ಶ್ರೀನಿವಾಸ ನರಸಿಂಹಾಚಾರ್ಯ ಹೆಬಸೂರ**

ಪೆನಶನರ ಮಾಸ್ತರ,

**ಧಾರವಾಡ.**





೧೯೨೮.






**ಬೆಲೆ ೪ ಆಣೆ.**

# ಪ್ರಸ್ತಾವನೆ.



ಕೆಲವು ವರ್ಷಗಳ ಹಿಂದೆ ನಾನು "ಶ್ರೀ ವೆಂಕಟೇಶ ಮಹಾತ್ಮ್ಯ" ಎಂಬ ಪೌರಾಣಿಕ ಗ್ರಂಥವನ್ನು ಕನ್ನಡದಲ್ಲಿ ಬರೆದ ಮೇಲೆ ಅಂಥ ಇಂಥ ೩-೪ ಚಿಕ್ಕ ಕಥೆಗಳನ್ನು ಬರೆದು ಏನೋ ಅಲ್ಪ ಸ್ವಲ್ಪ ಕನ್ನಡ ಭಾಷೆಯ ಸೇವೆಯನ್ನು ಮಾಡಿದೆನು. ನಮ್ಮಲ್ಲಿ ಸಂಸ್ಕೃತ ಪೌರಾಣಿಕ ಗ್ರಂಥಗಳ ಭಾಂಡಾರವೇ ಇರುತ್ತಿದ್ದು, ಅವುಗಳನ್ನು ಕನ್ನಡದಲ್ಲಿ ಭಾಷಾಂತರ ಮಾಡಿದರೆ ಕನ್ನಡಿಗರಿಗೆ ಉಪಯೋಗವಾಗುವದೆಂದು ತಿಳಿದು ಕೆಲವು ವಿದ್ವಾಂಸರು ಹಲವು ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದರು. ಜನರಾದರೂ ಭಕ್ತಿಯಿಂದ ಅವುಗಳನ್ನು ಓದಹತ್ತಿದರು. ಈ ವಿಚಾರವನ್ನು ತಿಳಿದು ಅಂಥ ಇಂಥ ಕಾಲ್ಪನಿಕ ಕಥೆಗಳನ್ನು ಬರೆಯುವದಕ್ಕಿಂತ ಪೌರಾಣಿಕ ಗ್ರಂಥಗಳೊಳಗಿನ ಯಾವದಾದರೂ ಒಂದು ಕಥೆಯನ್ನು ಬರೆದರೆ ನಮ್ಮ ಪುರಾತನ ಗ್ರಂಥಗಳಲ್ಲಿ ನೀತಿಪರವಾಗಿಯೂ, ಮಹತ್ವವಾಗಿಯೂ ಇರುವ ಕಥಾ ಭಾಗಗಳ ಮಹತ್ವವಾದರೂ ನಮ್ಮವರಿಗೆ ತಿಳಿಯಬಹುದೆಂಬ ಅಭಿಪ್ರಾಯದಿಂದ ಮಹಾಭಾರತದೊಳಗಿನ 'ಅಸ್ತೀಕಾಖ್ಯಾನ' ಎಂಬದೊಂದು ಈ ಸಣ್ಣ ಕಥೆಯನ್ನು ಬರೆದಿರುವೆನು.

'ಆಸ್ತೀಕನ ನಾಮಸ್ಮರಣೆಯನ್ನು ಯಾರು ಮಾಡುವರೋ ಅವರಿಗೆ ಸರ್ಪಬಾಧೆಯು ಆಗಲಿಕ್ಕಿಲ್ಲ' ವೆಂದು ಆದಿಶೇಷ, ವಾಸುಕಿ, ತಕ್ಷಕ ಮೊದಲಾದ ಸರ್ಪಗಳು ಶಪಥ ಮಾಡಿದ ವಿಷಯವು ಈ ಕಥೆಯ ಕೊನೆಯ ಭಾಗದಲ್ಲಿ ವಿವರಿಸಲ್ಪಟ್ಟದೆ. ಇದರಂತೆಯೇ ವೇದದಲ್ಲಿಯೂ ಸಹ "ಅಸ್ತೀಕ ವಚನಂ ಶ್ರುತ್ವಾಯಃ ಸರ್ಪೋ ನ ನಿವರ್ತತೆ | ಶತಧಾಭಿದ್ಯತೆ ತೇ ಮೂರ್ಧ್ನಿ ಶಿಶುವೃಕ್ಷಫಲಂ ಯಥಾ" | ಎಂದು ಹೇಳಿರುತ್ತದೆ. ಅದೇ ವಿಶ್ವಾಸದಿಂದಲೇ ನಮ್ಮವರು ಇನ್ನೂವರೆಗೂ ಮನೆಗಳಲ್ಲಿ 'ಆಸ್ತೀಕ' ಅಂತ ಬರೆಯುವ ರೂಢಿಯೂ, ರಾತ್ರಿಯಲ್ಲಿ ಮಲಗುವಾಗ "ಆಸ್ತೀಕ ಆಸ್ತೀಕ" ಅಂತ ಸ್ಮರಣೆ ಮಾಡುವ ರೂಢಿಯೂ ನಮ್ಮಲ್ಲಿ ಕಂಡು ಬರುತ್ತದೆ. ಒಟ್ಟಿಗೆ ಆಸ್ತೀಕನ ಸ್ಮರಣೆಯನ್ನು ಮಾಡಿದರೆ ಸರ್ಪಬಾಧೆಯು ಆಗುವದಿಲ್ಲೆಂದು ನಮ್ಮ ನಂಬಿಗೆಯು ಇರುತ್ತದೆ. "ಯಾದೃಸೀ ಭಾವನಂ ಯಸ್ಯಾಃ ಸಿದ್ಧಿರ್ಭವತಿ ತಾದೃಶೀ' ಎಂಬಂತೆ ಮಂತ್ರತಂತ್ರಗಳಲ್ಲಿಯೂ, ಪುರಾಣ ಪುಣ್ಯ ಕಥೆಗಳಲ್ಲಿಯೂ, ಕ್ರಿಯಾಕರ್ಮಗಳಲ್ಲಿಯೂ, ದೇವರಲ್ಲಿಯೂ ಯಾವ ಪ್ರಕಾರ ನಮ್ಮ ಭಾವನೆಯು ಇರುವದೋ? ಅದರಂತೆಯೇ ನಾವು ಫಲಗಳನ್ನು ಹೊಂದುವೆವು. ನಾಸ್ತೀಕರಾದವರಿಗೆ ಆಸ್ತೀಕ ಅಂದರೇನು? ದೇವರೆಂದರೇನು? ಮಂತ್ರತಂತ್ರಗಳೆಂದರೇನು? ಯಾವದರಲ್ಲಿಯೂ ಅವರಿಗೆ ವಿಶ್ವಾಸವೇ ಇರುವದಿಲ್ಲ; ಅಂದ ಮೇಲೆ ಅರ್ಥಾತ್ ಅವರಿಗೆ

ಫಲಗಳು ಹೇಗೆ ಸಿಕ್ಕಾವು? ಮುಖ್ಯವಾಗಿ ಯಾವದರಲ್ಲಿಯಾಗಲೀ ವಿಶ್ವಾಸವು ಅವಶ್ಯ ವಾದದ್ದು; "ವಿಶ್ವಾಸಃ ಫಲದಾಯಕಃ" ಎಂಬ ಉಕ್ತಿಯು ಸತ್ಯವದೆ.

ನಮ್ಮ ಪೂರ್ವಕಾಲದ ಬ್ರಾಹ್ಮಣರು ನಮ್ಮ ಧರ್ಮದಲ್ಲಿ ಹೇಳಿದ ಪ್ರಕಾರ ಕರ್ಮ ಮಾರ್ಗದಲ್ಲಿ ನಿರತರಾಗಿ ತಪೋಬಲದಿಂದ ಎಂಥೆಂಥ ಮಹತ್ಕಾರ್ಯಗಳನ್ನು ಮಾಡಿದ ರೆಂಬುವದು ಈ ಕಥೆಯು ಮೇಲಿಂದ ತಿಳಿದುಬರುತ್ತದೆ. ಅವರ ವಂಶಜರಾದ ನಾವು ಧರ್ಮಮಾರ್ಗವನ್ನು ಬಿಟ್ಟು, ದೇವರಲ್ಲಿ ಶ್ರದ್ಧೆಯಿಲ್ಲದೆ ನಡೆಯಲಿಕ್ಕೆ ಹತ್ತಿದ್ದರಿಂದ ಬ್ರಾಹ್ಮಣ ರಾದ ನಮ್ಮ ಮಹತ್ವವು ಕಡಿಮೆಯಾಗಿ ನಮಗೆ ಅವನತಿಯು ಕಾಲವು ಪ್ರಾಪ್ತವಾಗುತ್ತ ನಡೆದದೆ. ಈ ಸಣ್ಣ ಕಥೆಯನ್ನು ಓದಿದರೆ "ನಮ್ಮ ಪೂರ್ವಜರು ತಪಃಸಾಮರ್ಥ್ಯದಿಂದ ಅಗಾಧವಾದ ಮಹತ್ಕಾರ್ಯಗಳನ್ನು ಸಾಧಿಸಿಕೊಂಡರೇಕೆ? ಅವರ ವಂಶಜರಾದ ನಾವು ಬರಬರುತ್ತ ನಿರ್ಬಲರಾಗುತ್ತ ನಡೆದೆವೇಕೆ?" ಎಂಬ ವಿಚಾರವೂ, ಧರ್ಮಶ್ರದ್ಧೆಯೂ ಸ್ವಲ್ಪಾದರೂ ನಮಗೆ ಬರದೆ ಇರಲಾರವೆಂದು ನಾನು ತಿಳಿಯುತ್ತೇನೆ. ಇದು ಜೇತೊಬ್ಬರ ದೂಷಣೆಯನ್ನು ಮಾಡುವ ಮಾತಲ್ಲ.

ಈ ಪುಸ್ತಕವನ್ನು ಶ್ರೀಧರ ಕವಿಯಿಂದ ವಿರಚಿತವಾದ "ಪಾಂಡವ ಪ್ರತಾಪ" ಎಂಬ ಪ್ರಾಕೃತ ಗ್ರಂಥದ ಆಧಾರದ ಮೇಲಿಂದ ವಾಕ್ಯರಚನೆಯಲ್ಲಿ ಮಾತ್ರ ಹೆಚ್ಚು ಕಡಿಮೆ ಮಾಡಿ ಬರೆದಿರುವೆನಲ್ಲದೆ, ಕಥಾಭಾಗವು ಯಥಾತಥ್ಯವಾಗಿದೆ. ಇದರಲ್ಲಿ ಏನಾದರು ನ್ಯೂನಾಧಿಕಗಳು ಇದ್ದಲ್ಲಿ ಶ್ರೀ ಹರಿಯೂ, ವಾಚಕರಾದ ನೀವೂ ಕ್ಷಮೆಯನ್ನು ಮಾಡ ಬೇಕೆಂದು ಬೇಡಿಕೊಳ್ಳುವೆನು.

ತಮ್ಮ ವಿಧೇಯ,

ಧಾರವಾಡ.
ತಾ||೧೫-೧೨-೨೭

ಶ್ರೀನಿವಾಸ ನರಸಿಂಹಾಚಾರ್ಯ ಕಾಟೋಕಿ
ಉರ್ಫ ಹೆಬಸೂರ,
ಪೇನಶನರ ಮಾಸ್ತರ.

---

# ಗ್ರಂಥಕರ್ತನ ವಿನಂತಿ.

ಧಾರವಾಡ ತಾಲೂಕ ಕಬ್ಬೂರ ಮೊದಲಾದ ಗ್ರಾಮಗಳ ಕುಲಕರ್ಣಿಗಳಾದ ಯುತ ಶ್ರೀನಿವಾಸರಾವ ಭೀಮರಾವ ಕುಲಕರ್ಣಿ ಇವರು ಈ ಪುಸ್ತಕದ ುದ್ರಣಕ್ಕಾಗಿಯೂ, ಬೇರೆ ರೀತಿಯಾಗಿಯೂ ಉದಾರಹಸ್ತದಿಂದ ಧನಸಹಾಯ ಮಾಡಿದ ಗ್ಗೆ ನಾನು ಇವರಿಗೆ ಪೂರ್ಣ ಕೃತಜ್ಞನಾಗಿದ್ದೇನೆ. ಇದೇ ಪ್ರಕಾರ ಇವರಿಂದ ಕರ್ನಾ ಕ ವಾಙ್ಮಯ ಸೇವೆಯಾಗಲೆಂದು ಹಾರೈಸುವೆನು

ಈಗಿನ ಪರಿಸ್ಥಿತಿಯಲ್ಲಿ ಕಲ್ಪಿತ ಕಾದಂಬರಿಗಳೇ ಹೆಚ್ಚು ಜನಪ್ರಿಯವಾಗಹತ್ತಿದ್ದ ದ ಸುರಸ ಗ್ರಂಥಮಾಲಾ, ಮನೋರಂಜನ ಗ್ರಂಥಮಾಲಾ ಮೊದಲಾದ ಹೆಸರಿನ ನೇಕ ಗ್ರಂಥಮಾಲೆಗಳು ಹೊರಡುತ್ತಿರುವವು; ಆದರೆ ಪೌರಾಣಿಕ ಗ್ರಂಥಮಾಲೆಯು ನ್ನೂ ವರೆಗೂ ಹೊರಟಂತೆ ನನಗಂತೂ ಕಂಡು ಬಂದಿಲ್ಲ. ಕಲ್ಪಿತ ಕಥೆಗಳು ವಾಚಕರಿಗೆ ಣಿಕ ಆನಂದವನ್ನುಂಟು ಮಾಡುತ್ತವಲ್ಲದೆ, ಹೆಚ್ಚಿನ ಲಾಭವನ್ನೇನೂ ಮಾಡಿಕೊಡುವದಿಲ್ಲ. ರಾಣಿಕ ಕಥೆಗಳ ವಿಚಾರವು ಹಾಗಿರುವದಿಲ್ಲ. ವಾಚಕರಿಗೆ ಮನೋರಂಜನವನ್ನು ಮಾಡಿ ೂಡುವದಲ್ಲದೆ ನಮ್ಮ ಭರತಖಂಡದೊಳಗಿನ ಪೂರ್ವ ಕಾಲದ ಜನರು ಎಂಥ ಮಹತ್ಕಾ ರ್ಯಗಳನ್ನು ಮಾಡಿದರೆಂಬುವದನ್ನು ತಿಳಿಸಿ ನೀತಿ ಮಾರ್ಗವನ್ನು ಸಹ ತೋರಿಸಿ ಕೊಡು ವು. ಈ ವಿಚಾರವನ್ನು ತಿಳಿದು ಈ ಪೌರಾಣಿಕ ಗ್ರಂಥಮಾಲೆಯನ್ನು ತೆಗೆದು ಮೊದಲ ಯ ಪುಷ್ಪವನ್ನು ವಾಚಕರಾದ ನಿಮಗೆ ಅರ್ಪಣ ಮಾಡಿರುವೆನು. ಇದರಂತೆ ಮೂರು ೂರು ತಿಂಗಳಿಗೊಂದರಂತೆ ನಮ್ಮ ಪುರಾಣದೊಳಗಿನ ಯಾವದಾದರೊಂದು ಇಂತಿಹ ಥಾರೂಪವಾದ ಪುಷ್ಪವನ್ನು ನಿಮ್ಮ ಕೈಯಲ್ಲಿ ಕೊಡುವೆನು. ಪ್ರಾಪ್ತಿಯ ಕಡೆಗೆ ಹೆಚ್ಚು ಕ್ಷ್ಯವಿಡದೆ ಪ್ರತ್ಯೇಕ ಪುಷ್ಪದ ಬೆಲೆಯನ್ನು ನಾಲ್ಕಾಣೆ ಇಟ್ಟಿರುತ್ತೇನೆ. ಮುಂಗಡವಾಗಿ ರ್ಗಣೀ ಒಂದು ರೂಪಾಯಿ ಕೊಟ್ಟವರಿಗೆ ಅಂಚೇವೆಚ್ಚವು ಬೀಳದ ಹಾಗೆ ಮೂರು ಂಗಳಿಗೊಂದರಂತೆ ಪುಸ್ತಕವನ್ನು ಕಳಿಸಿ ಕೊಡುವೆನು. ವಾಚಕರಾದ ಬಂಧುಭಗಿನಿ ರೇ, ದಯಮಾಡಿ ಅಲ್ಪನಾದ ನನಗೆ ತಮ್ಮ ಆಶ್ರಯವನ್ನು ಕೊಡಬೇಕೆಂಬದಾಗಿ ನನ್ನ ನಂತಿ.

ಗ್ರಂಥಕರ್ತ.

# ಅಭಿಪ್ರಾಯವು.

## ನನ್ನ ಎರಡು ಮಾತುಗಳು.

ಶ್ರೀಧರ ಕವಿಯಿಂದ ರಚಿತವಾದ 'ಪಾಂಡವ ಪ್ರತಾಪ' ಎಂಬ ಗ್ರಂಥದ ಆಧಾ ದಿಂದ ಬರೆಯಲ್ಪಟ್ಟಿರುವ 'ಆಸ್ತೀಕಾಖ್ಯಾನ' ಎಂಬ ಚಿಕ್ಕ ಗ್ರಂಥವನ್ನು ಓದಿ ನೋಡಿದೆ ನಮ್ಮವರಿಗೆ ಚಿರಪರಿಚಿತವಾದ ಮಹಾಭಾರತದೊಳಗಿನ ಪರೀಕ್ಷಿದ್ರಾಜನ 'ಸರ್ಪಯಾಗ' ಕಥಾವಿಷಯವೇ ಇದರಲ್ಲಿ ಸಂಗ್ರಹವಾಗಿ ಹೇಳಲ್ಪಟ್ಟಿರುವದರಿಂದ ಕಥೆಯ ವಿಷಯವಾ ಹೆಚ್ಚಿಗೆ ಏನೂ ಹೇಳಬೇಕಾಗಿಲ್ಲ.

ಈಗಿನ ನವನಾಗರಿಕತೆಯ ಯುಗದಲ್ಲಿ ಹಳೆಯ ಪುರಾಣ ಪುಣ್ಯ ಕಥೆಗಳ ವಿಷ ವಾಗಿ ಜನರಲ್ಲಿ ಅದೇನೋ ಒಂದು ವಿಧವಾದ ಅನಾದರವು ತಲೆದೋರಹತ್ತಿರುವದೆಂ ತಪ್ಪಾಗದು. ಕಥೆ-ಕಾದಂಬರಿಗಳೇ-ಅದರಲ್ಲಿಯೂ ಪ್ರಣಯ, ವಿರಹ ಮುಂತಾ ಸ್ತ್ರೀ-ಪುರುಷರ ಮನಸ್ಸನ್ನು ಉತ್ತೇಜನಗೊಳಿಸಿ ಕ್ಷಣಿಕ ಆನಂದವನ್ನುಂಟು ಮಾಡು ಗ್ರಂಥಗಳೇ ಸಾಮಾನ್ಯ ಜನರಿಗೆ ಹೆಚ್ಚು ಪ್ರಿಯವಾಗಿ ತೋರಹತ್ತಿವೆ. ವಾಚಕರನ ಅನುಸರಿಸಬೇಕಾಗಿರುವ ಲೇಖವರ್ಗವೂ ಕೂಡ ಇಂತಿಹ ಗ್ರಂಥಗಳ ರಚನೆಯಲ್ಲಿಯೇ ತಮ್ಮ ಕುಶಲತೆಯನ್ನೇ ತೋರ್ಪಡಿಸುತ್ತಿರುವದು ಸಹಜವಾಗಿದೆ. ಇಂತಿಹ ಪರಿಸ್ಥಿ ಯಲ್ಲಿ ಇಂತಿಹ ಪೌರಾಣಿಕ ಕಥೆಗಳು ಎಷ್ಟುಮಟ್ಟಿಗೆ ಜನಪ್ರಿಯವಾಗಬಹುದೆಂಬದನ ಹೇಳಲು ಧೈರ್ಯವಾಗದಿದ್ದರೂ ಇಂತಿಹ ಗ್ರಂಥಗಳು ಜನರಲ್ಲಿ ಆಸ್ತೀಕ ಭಾವನೆಯನ ಹುಟ್ಟಿಸಿ ಬೆಳೆಸುವದಕ್ಕೆ ಸಹಾಯಕಾರಿಗಳಾಗುವವೆಂಬುವದರಲ್ಲಿ ಸಂದೇಹವೇನು ತೋರದು. ಗ್ರಂಥದ ವಿಷಯವು ಪೌರಾಣಿಕವಾಗಿರುವಂತೆ ಭಾಷೆಯೂ ಪೌರಾಣಿ ಪದ್ಧತಿಯದೇ ಆಗಿದೆ. ಹಸ್ತಲಿಖಿತ ಪ್ರತಿಯೊಳಗಿನ ಅಲ್ಪ ಸ್ವಲ್ಪ ಚಿಕ್ಕ ಪುಟ್ಟ ದೋಷ ಗಳು ಮುದ್ರಣಕಾಲದಲ್ಲಿ ಸರಿಯಾಗಬಹುದೆಂಬ ನಂಬಿಗೆಯದೆ. ಶ್ರೀ. ಶ್ರೀನಿವಾಸ ಚಾರ್ಯರು ತಮ್ಮ ಇಳಿವಯಸ್ಸಿನಲ್ಲಿ ಇಂತಿಹ ಕಾರ್ಯವನ್ನು ಕೈಕೊಂಡಿರುವದು ಸ್ತುತ್ಯವೂ, ಅನುಕರಣೀಯವೂ, ಪ್ರೋತ್ಸಾಹನೀಯವೂ ಆಗಿದೆ.

ಅಖಿಳ ಲೋಕಪಾಲಕನಾದ ಶ್ರೀಹರಿಯ ಕರುಣೆಯಿಂದ ಶ್ರೀ. ಆಚಾರ್ಯರು ಇಂತಿಹ ಇನ್ನೂ ಹಲವು ಗ್ರಂಥಗಳನ್ನು ರಚಿಸಿ ಕನ್ನಡಿಗರ ಭಕ್ತಿಶ್ರದ್ಧೆಗಳನ್ನು ಹೆಚ್ಚಿಸಲಿಕ್ಕೆ ಪ್ರಯತ್ನಿಸಿ ಶ್ರೇಯೋಪಂತರಾಗಲೆಂದು ಹಾರೈಸುವೆನು.

ಶ್ರೀ ಸರಸ್ವತೀ ಮಂದಿರಮ್,
ಧಾರವಾಡ.
ತಾ॥ ೧೦-೧೦-೧೯೩೭.

N. V. Kurdi.

# ಆಸ್ತೀಕಾಖ್ಯಾನ

## ಪೌರಾಣಿಕ ಕಥೆ.

### ಉಪೋದ್ಘಾತ.



ಈ ಪುಣ್ಯಭೂಮಿಯಾವ ಭರತಖಂಡದ ಉತ್ತರ ಭಾಗದಲ್ಲಿ "ಹಸ್ತಿನಾಪುರ" ವೆಂಬದೊಂದು ರಾಜಧಾನಿಯು ಸಕಲ ವೈಭವಗಳಿಂದ ಶೋಭಿಸುತ್ತಿರುವದು. ದ್ವಾಪರಯುಗದ ಅಂತ್ಯಭಾಗದಲ್ಲಿ ಕುರುಕುಲಾವತಂಸನಾದ ಧರ್ಮರಾಜನು ಧರ್ಮದಿಂದ ರಾಜ್ಯವನ್ನಾಳಿ ಸ್ವರ್ಗಾರೋಹಣವನ್ನು ಮಾಡಿದ ಮೇಲೆ ಪಾಂಡವರ ಪೌತ್ರನಾದ ಪರೀಕ್ಷಿತನು ಪಟ್ಟಕ್ಕೆ ಕುಳಿತು ಸ್ವಲ್ಪಕಾಲ ರಾಜ್ಯವನ್ನಾಳಿದ ನಂತರ ಸರ್ಪದಂಶವಾಗಿ ಮರಣವನ್ನೈದಲು, ಆ ಮೇಲೆ ಅವನ ಪುತ್ರನಾದ ಜನಮೇಜಯನು ರಾಜ್ಯವನ್ನಾಳಹತ್ತಿದನು. ಇವನು ರಾಜ್ಯಾಧಿಕಾರವನ್ನು ಹೊಂದಿದಾಗ ಹದಿನಾರು ವರ್ಷದ ಪ್ರಾಯದವನಾಗಿದ್ದರೂ, ಸರ್ವ ಲಕ್ಷಣಗಳಿಂದ ವಿರಾಜಿಸುವವನಾಗಿಯೂ, ಗೋಬ್ರಾಹ್ಮಣ ಪ್ರತಿಪಾಲಕನಾಗಿಯೂ ಇದ್ದು, ಬಹು ನೀತಿಯಿಂದ ರಾಜ್ಯವನ್ನಾಳುತ್ತಿದ್ದನು. ಒಂದು ದಿವಸ ಆ ರಾಜನು ಸಭಾಸ್ಥಾನದಲ್ಲಿ ತನ್ನ ಸಿಂಹಾಸನದ ಮೇಲೆ ವಿರಾಜಿಸುತ್ತಿರಲು, ಮಂತ್ರಿ ಸೇನಾನಾಯಕರೂ, ಮುಖ್ಯ ಮುಖ್ಯರಾದ ಪುರಜನರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಂಡಿದ್ದರು. ಸೂತಮಾಗಧ ಬಂದೀಜನರು ಮಹಾರಾಜನ ಪ್ರತಾಪವನ್ನು ವರ್ಣಿಸುತ್ತಿದ್ದರು. ಇಂತಹ ಆನಂದದ ಸಮಯದಲ್ಲಿ ಜನಮೇಜಯರಾಜನು ತನ್ನ ಮಂತ್ರಿಗೆ:—"ಸಚಿವನೇ, ನನ್ನ ಪಿತನಾದ ಪರೀಕ್ಷಿತನು ಅಲ್ಪ ವಯಸ್ಸಿನಲ್ಲಿಯೇ ಮರಣವನ್ನು ಹೊಂದಿದನೆಂದು ಕೇಳಿರುತ್ತೇನೆ. ಇದರ ಕಾರಣವೇನು? ಈ ಸಂಗತಿಯನ್ನು ನನಗೆ ನಿವೇದನ ಮಾಡು" ಎಂದು ಆಜ್ಞಾಪಿಸಿದನು. ರಾಜನು ಹೀಗೆ ಕೇಳಿದ ಕೂಡಲೆ ಮಂತ್ರಿಯು ದುಃಖಾಶ್ರುಗಳನ್ನು ಸುರಿಸುತ್ತ ಗದ್ಗದಕಂಠವುಳ್ಳವನಾಗಲು, ಅವನ ಬಾಯಿಯಿಂದ ಮಾತುಗಳೇ ಹೊರಡದಾದವು. ರಾಜನಾದರೂ ಅಶ್ರುಗಳನ್ನು ಸುರಿಸಹತ್ತಿದನು. ಸಭೆಯು ನಿಃಶಬ್ದವಾಯಿತು. ಆಗ ಮಂತ್ರಿಯು ಕೈಜೋಡಿಸಿಕೊಂಡು ಹೇಳಲಾರಂಭಿಸಿದನು.

———

# ಕಥಾ ಪ್ರಾರಂಭ.



## ೧ನೆಯ ಅಧ್ಯಾಯ.

### ಪಶ್ಚಾತ್ತಾಪ.



ಮಹಾರಾಜನೇ, ಪಾಂಡವರು ಸ್ವರ್ಗಾರೋಹಣವನ್ನು ಮಾಡಿದ ಮೇಲೆ ಕಲಿಯುಗವು ಪ್ರಾರಂಭವಾಗಹತ್ತಿತು. ಆ ಮೇಲೆ ನಿನ್ನ ಪಿತಾಮಹನಾದ ಅಭಿಮನ್ಯುವಿನ ನಂದನನೂ, ಧರ್ಮರಾಜನಂತೆ ಧರ್ಮಮೂರ್ತಿಯೂ ಆಗಿರುವ ನಿನ್ನ ಪಿತನಾದ ಪರೀಕ್ಷಿತರಾಜನು ರಾಜ್ಯಾಧಿಕಾರವನ್ನು ಕೈಕೊಂಡು ನೀತಿಯಿಂದ ರಾಜ್ಯವನ್ನಾಳುತ್ತಿದ್ದನು. ಒಂದಾನೊಂದು ದಿವಸ ಅವನು ಬೇಟೆಯನ್ನಾಡಬೇಕೆಂದು ತನ್ನ ಚತುರಂಗ ಸೈನ್ಯದೊಡನೆ ಹೊರಟು ಬಂದು ಘೋರಾರಣ್ಯವನ್ನು ಹೊಕ್ಕು ಮೃಗಗಳನ್ನು ಶೋಧ ಮಾಡುತ್ತ ನಡೆದಿದ್ದನು. ಅಷ್ಟರಲ್ಲಿ ಭಗವಾನ್ ಸೂರ್ಯನಾರಾಯಣನು ತನ್ನ ಪ್ರಖರವಾದ ಸಹಸ್ರ ಕಿರಣಗಳಿಂದ ಪ್ರಕಾಶಿಸಹತ್ತಲು, ಅಲ್ಲಿರುವ ಸರ್ವ ಮೃಗಪಕ್ಷಿಗಳು ಅಂತಹ ಬಿಸಿಲಿನ ತಾಪವನ್ನು ತಡೆಯಲಾರದೆ ತಮ್ಮ ತಮ್ಮ ಸ್ಥಾನಗಳಲ್ಲಿಯೇ ಸ್ವಸ್ಥವಾಗಿ ವಾಸಮಾಡಿಕೊಂಡಿದ್ದವು. ಪರೀಕ್ಷಿತನು ಅಂತಹ ಉಗ್ರವಾದ ಬಿಸಿಲಿನಲ್ಲಿಯೇ ತಾನು ಧನುರ್ಧಾರಿಯಾಗಿ ಬೇಟೆಯನ್ನು ಶೋಧಮಾಡುತ್ತ ನಡೆದಿರಲು, ಅವನ ಚತುರಂಗಬಲದ ಕೋಲಾಹಲ ಧ್ವನಿಯಿಂದಲೂ, ರಾಜನ ಧನುಷ್ಟಂಕಾರ ಧ್ವನಿಯಿಂದಲೂ ಗಾಬರಿಯಾಗಿ ಆ ವನದಲ್ಲಿರುವ ಮೃಗಗಳು ತಮ್ಮ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಅತ್ತಿತ್ತ ಓಡಾಡಹತ್ತಿದವು. ಅವುಗಳಲ್ಲಿ ಒಂದು ದೊಡ್ಡದಾದ ಎರಳೆಯು ಓಡಿ ಹೋಗುವದನ್ನು ನೋಡಿದ ಕೂಡಲೆ ರಾಜನು ಅದರ ಬೆನ್ನು ಹತ್ತಿ ತನ್ನ ಬಿಲ್ಲಿನಲ್ಲಿ ಬಾಣವನು ಹೂಡಿ ಹೊಡೆಯಲು, ಆ ಬಾಣವು ಆ ಎರಳೆಯ ದೇಹದಲ್ಲಿ ನಾಟಿ ಪಾರಾಗಿ ಹೋಯಿತು; ಆದರೂ ಅಂತಹ ಭಯಂಕರವಾದ ಬಾಣದ ಹೊಡತವನ್ನು ಸೈರಿಸಿಕೊಂಡು ಅದು ಜೀವದ ಪರಿವೆಯಿಲ್ಲದೆ ಗಿರಿಕಂದರಗಳಲ್ಲಿ ತನ್ನ ನಾಲ್ಕೂ ಕಾಲುಗಳನ್ನು ಒಮ್ಮೆಲೆ ಎತ್ತಿತ್ತಿ ಹಾಕುತ್ತ ಓಡಹತ್ತಿರಲು ಪರೀಕ್ಷಿತನಾದರೂ ಅದರ ಬೆನ್ನು ಬಿಡದೆ ಓಡಹತ್ತಿದನು. ಹೀಗೆ ಆ ಎರಳೆಯು ರಾಜನನ್ನು ಕಾನನದಲ್ಲಿ ಬಹು ದೂರ ಎಳಕೊಂಡು ಹೋಯಿತು. ಆದರೂ ಅದೇನೂ ಅವನ

ಕೈಗೆ ಸಿಕ್ಕಲಿಲ್ಲ. ರಾಜನು ಮಾತ್ರ ಮಧ್ಯಾಹ್ನದ ಬಿಸಿಲಿನ ತಾಪದಿಂದ ಬಹಳವಾಗಿ ಕಂಗೆಟ್ಟಿದ್ದರೂ, ಇದನ್ನು ಬಿಟ್ಟರೆ ತನ್ನ ಶೌರ್ಯಕ್ಕೆ ಕುಂದು ಬಂದೀತೆಂಬ ಅಭಿಮಾನದಿಂದ ಹಾಗೆಯೇ ಅದರ ಬೆನ್ನು ಹತ್ತಿದನು. ಆ ಎರಳೆಯು ಬಹು ದೂರ ಹೋಗಿ ಎಲ್ಲಿಯೋ ಅಡಿಗಿಕೊಂಡಿತು. ಆಗ ರಾಜನು ಅದನ್ನು ಕಾಣದೆ ನಿರಾಶೆಯುಳ್ಳವನಾಗಿ ಹಿಂದಕ್ಕೆ ತಿರಿಗಿ ನೋಡಲು, ತನ್ನ ಸೈನ್ಯವೂ ಇದ್ದಿಲ್ಲ. ಓಡಿ ಓಡಿ ಪರಿಶ್ರಾಂತನಾದದ್ದರಿಂದ ನೀರಡಿಸಿ ಒಂದು ಮರದ ನೆರಳಿನಲ್ಲಿ ಹೋಗಿ ಕುಳಿತುಕೊಂಡನು. ಆಗಲವನಿಗೆ ಸ್ವಲ್ಪ ಸಮಾಧಾನ ವಾದರೂ ನೀರಡಿಕೆಯು ಬಹಳವಾಗಿ ಸುತ್ತುಮುತ್ತು ನೋಡುತ್ತಿರಲು, ದೂರದಲ್ಲಿ ಕೆಲವು ಗೋಪಾಲ ಬಾಲಕರನ್ನು ಕಂಡನು. ಅವರಲ್ಲಿಯೇನಾದರೂ ನೀರು ಸಿಕ್ಕರೆ ತನ್ನ ತೃಷೆ ಯನ್ನು ಕಳೆದುಕೊಳ್ಳುವೆನು ಎಂದು ಪರೀಕ್ಷಿತನು ಅವರ ಹತ್ತರ ಹೋಗಿ—"ನೀರು ಕೊಡಿರಿ" ಎಂದು ಕೇಳಲು ಅವರು—"ಮಹಾರಾಜರೇ, ನಮ್ಮಲ್ಲಿ ನೀರಿರುವದಿಲ್ಲ; ಬೇಕಾದರೆ ಗೋಕ್ಷೀರವನ್ನು ಪ್ರಾಶನ ಮಾಡಿರಿ" ಎಂದು ಒಂದು ದೊಡ್ಡ ದೊನ್ನೆಯ ತುಂಬ ಹಾಲು ಕೊಡುವದಕ್ಕೆ ಹೋಗಲು, ರಾಜನು ಗರ್ವದಿಂದ ಅಮೃತಕ್ಕೆ ಸರಿಯಾದ ಗೋಕ್ಷೀರವನ್ನು ತಕ್ಕೊಳ್ಳದೆ ಹಾಗೇ ಮುಂದಕ್ಕೆ ಸಾಗಿ ಘೋರಾರಣ್ಯದಲ್ಲಿ ನೀರನ್ನು ಹುಡುಕುತ್ತ ನಡೆದನು.

ಅಮೃತಕ್ಕೆ ಸರಿಯಾದ ಗೋಕ್ಷೀರವನ್ನು ಧಿಕ್ಕರಿಸಿದ್ದರಿಂದ "ಮುಂದಾಗುವ ದುಷ್ಪ ರಿಣಾಮದ ಸೂಚನೆ" ಎಂಬುವದು ಆ ರಾಜನಿಗೆ ತಿಳಿಯದೆ ಹಾಗೆಯೇ ಮುಂದಕ್ಕೆ ಸಾಗು ತ್ತಿರಲು, ಸಮೀಪದಲ್ಲಿ ಅವನು ಒಂದು ಋಷ್ಯಾಶ್ರಮವನ್ನು ಕಂಡು ಸಂತೋಷಪಟ್ಟು ಅಲ್ಲಿಗೆ ಬಂದು ನೋಡುತ್ತಿರಲು, ಅದು ಶಮೀಕ ಋಷಿಯ ಆಶ್ರಮವು. ಅವರು ತದೇಕ ಚಿತ್ತದಿಂದ ಧ್ಯಾನಸ್ಥರಾಗಿ ಕುಳಿತಿದ್ದರು. ಬಾಹ್ಯ ವಿಚಾರಗಳನ್ನು ಬಿಟ್ಟು ಅಂತರಂಗದಲ್ಲಿ ಶ್ರೀ ಪರಮಾತ್ಮನನ್ನು ತನ್ನ ಹೃದಯಾರವಿಂದದಲ್ಲಿಟ್ಟುಕೊಂಡು ಸಮಾಧಿಸ್ತರಾಗಿ ಕುಳಿತು ಕೊಂಡಿರುತ್ತಾರೆಂಬುವದು ರಾಜನಿಗೆ ತಿಳಿಯದೆ "ಮುನಿವಯರೇ, ಇಲ್ಲಿಂದ ಒಂದು ಕುರಂಗವೇನಾದರೂ ಓಡಿ ಹೋಯಿತೇ ಹೇಗೆ?" ಎಂದು ಕೇಳಲು, ಧ್ಯಾನಸ್ಥರಾದ ಅವರು ಕಣ್ಣುಗಳನ್ನು ಸಹ ತೆಗೆಯದೆ ಯಾವ ಉತ್ತರವನ್ನೂ ಕೊಡಲಿಲ್ಲ. ಆಗಲಾ ರಾಜನು ಅರಣ್ಯದಲ್ಲಿ ತಿರಿತಿರಿಗಿ ಪರಿಶ್ರಾಂತನಾದದ್ದರಿಂದಲೂ, ಈ ಋಷಿಗಳು ತನ್ನ ಮಾತಿಗೆ ಉತ್ತರವನ್ನು ಕೊಡದೆ ಇದ್ದದರಿಂದಲೂ ಬಹಳೇ ವಿಷಾದವುಳ್ಳವನಾಗಿ ಕ್ರೋಧ ದಿಂದ—"ಎಲಾ! ಮಹಾರಾಜಾಧಿರಾಜನಾದ ನಾನು ಪರಿಶ್ರಾಂತನಾಗಿ ಇವರಿದ್ದಲ್ಲಿಗೆ ಬಂದರೆ ನನ್ನನ್ನು ಆದರಿಸುವದಂತೂ ಒತ್ತಟ್ಟಿಗಿರಲಿ, ನಾನು ಕೇಳಿದ ಮಾತಿಗೆ ಉತ್ತರವನ್ನು ಯಾಕೆ ಕೊಡಬಾರದು? ಬ್ರಾಹ್ಮಣರು ಗರ್ವದಿಂದ ಬೆರೆತಿರುವರಲ್ಲವೇ? ಅಂತೇ ಅರಣ್ಯಾ ದಲ್ಲಿ ಗಡ್ಡೆಗೆಣಸುಗಳನ್ನು ತಿನುತ್ತ ಕೂಳಿಲ್ಲದೆ ಕಷ್ಟಪಡುತ್ತಿರುವರು" ಎಂದು ಆ ಪರೀ ಕ್ಷಿತನು ಸುತ್ತುಮುತ್ತು ನೋಡುತ್ತಿರಲು, ಅಲ್ಲಿಯೇ ಒಂದು ದೊಡ್ಡ ಮೃತಸರ್ಪವು ಬಿದ್ದಿರು

ವದನ್ನು ಕಂಡು ಅದನ್ನು ತನ್ನ ಧನುಃಕೋಟಿಯಿಂದ ಎತ್ತಿ, ಧ್ಯಾನಸ್ಥರಾಗಿ ಕುಳಿತಿರುವ ಆ ಋಷಿಗಳ ಕೊರಳಲ್ಲಿ ಹಾಕಿ ತಾನು ತನ್ನ ರಾಜಧಾನಿಗೆ ಹೊರಟುಹೋದನು.

ಮನುಷ್ಯನಿಗೆ ಮುಂದೆ ವಿನಾಶಕಾಲವು ಪ್ರಾಪ್ತವಾಗುವದಿದ್ದರೆ ಅವನಿಗೆ ವಿಪರೀತ ಬುದ್ಧಿಯು ಉತ್ಪನ್ನವಾಗುವದು ಸಹಜವೇ ಸರಿ. ಶಮೀಕ ಋಷಿಗಳು ಸಮಾಧಿಸ್ಥರಾಗಿ ಕುಳಿತಿರುವರೆಂಬುವದು ಇಷ್ಟು ಸಹ ಆ ರಾಜನಿಗೆ ತಿಳಿಯಬಾರದೇ? ಮತ್ತು ಇಂತಹ ಮಹಾತ್ಮರಿಗೆ ಅಪಮಾನ ಮಾಡಿದರೆ ಮುಂದೆ ತನ್ನ ಅವಸ್ಥೆಯು ಏನಾದೀತೆಂಬುವದು ಅವನಿಗೆ ಯಾಕೆ ತಿಳಿಯಬಾರದು? ಇದು ಮುಂದಿನ ಕರ್ಮಾನುಭೋಗವನ್ನು ಭೋಗಿಸುವ ಸೂಚನೆಯು. ಎಂತಹ ನೀತಿಶಾಸ್ತ್ರ ವಿಶಾರದನಾದರೂ ವಿನಾಶಕಾಲವು ಅವನಿಗೆ ಪ್ರಾಪ್ತವಾಗುವದಿದ್ದರೆ ಅವನಿಗೆ ವಿಪರೀತ ಬುದ್ಧಿಯು ಉತ್ಪನ್ನವಾಗುವದು.

ಇತ್ತಲಾ ರಾಜನು ಹೋದಮೇಲೆ ಆ ಶಮೀಕ ಋಷಿಗಳ ಕೊರಳಲ್ಲಿ ಹಾಕಲ್ಪಟ್ಟ ಮೃತಸರ್ಪವು ಕೊಳೆತು ಆಶ್ರಮದಲ್ಲೆಲ್ಲ ಮಹಾ ದುರ್ಗಂಧವು ಹರಡಿಕೊಂಡಿತು. ಆ ಮೃತಸರ್ಪಕ್ಕೆ ಸಣ್ಣ ಇರುವೆಗಳು ಹತ್ತಿ ಆ ಋಷಿಗಳ ಮೈತುಂಬ ಹರಿದಾಡುತ್ತ ಕಡಿಯಹತ್ತಿದವು; ಆದರೂ ಧ್ಯಾನಸ್ಥರಾದ ಅವರು ಯಾವದನ್ನೂ ಲಕ್ಷಿಸದೆ ತಮ್ಮ ಧ್ಯಾನದಲ್ಲಿಯೇ ತಲ್ಲೀನರಾಗಿದ್ದರು.

ಇತ್ತ ಆ ಶಮೀಕ ಋಷಿಗಳ ಪುತ್ರರಾದ ಶ್ರೀಂಗಿಯು ಆ ವೇಳೆಯಲ್ಲಿ ಬ್ರಹ್ಮದೇವರ ದರ್ಶನಕ್ಕಾಗಿ ಹೋಗಿದ್ದವರು ತಿರುಗಿ ಬಂದು ನೋಡುತ್ತಾರೆ. ತಮ್ಮ ಆಶ್ರಮದಲ್ಲಿ ದುರ್ಗಂಧಮಯವಾದ ವಾಸನೆಯು ಬರುತ್ತಿರುವದನ್ನು ತಿಳಿದು, 'ಇದೇನು ಸಂಗತಿಯು' ಎಂದು ತನ್ನ ಸಹಾಧ್ಯಾಯಿಗಳಾದ ಋಷಿಶಿಷ್ಯರನ್ನು ಕೇಳಲು, ಅವರು—"ಪರೀಕ್ಷಿತ ರಾಜನು ನಮ್ಮ ಆಶ್ರಮಕ್ಕೆ ಬಂದು ಒಂದು ದೊಡ್ಡ ಮೃತಸರ್ಪವನ್ನು ನಮ್ಮ ಗುರುಗಳ ಕೊರಳಲ್ಲಿ ಹಾಕಿ ಹೋಗಿದ್ದರಿಂದ ಅದು ಕೊಳೆತು ಇಷ್ಟು ದುರ್ಗಂಧವು ಆಶ್ರಮದಲ್ಲೆಲ್ಲ ವ್ಯಾಪಿಸಿರುತ್ತದೆ" ಎಂದು ಹೇಳಲು ಅದನ್ನು ಕೇಳಿ ಋಷಿಪುತ್ರನು ಕೋಪಿಷ್ಠನಾಗಿ ತನ್ನ ತಾತನು ಧ್ಯಾನಸ್ಥರಾಗಿ ಕುಳಿತಿರುವಲ್ಲಿಗೆ ಹೋಗಿ ನೋಡಲು ದುರ್ಗಂಧಮಯವಾದ ಮೃತಸರ್ಪವು ಅವರ ಕೊರಳಲ್ಲಿದ್ದದ್ದನ್ನೂ, ಇರುವೆಗಳು ಅವರ ಮೈಯ್ಯೆಲ್ಲ ಮುತ್ತಿದ್ದನ್ನೂ ಕಂಡು, ಕಲ್ಪಾಂತ್ಯದಲ್ಲಿ ರುದ್ರದೇವರ ತೃತೀಯ ನೇತ್ರಜ್ವಾಲೆಯು ಧಗಧಗಿಸುವಂತೆ ಆ ಶ್ರೀಂಗಿ ಋಷಿಯು ಕ್ರೋಧಪರವಶವುಳ್ಳವನಾಗಿ—'ಎಲಾ! ರಾಜರು ಈ ಜಗತ್ತಿನಲ್ಲಿ ಇಷ್ಟು ಗರ್ವದಿಂದ ಬೆರತಿರುವರಲ್ಲವೇ? ನಾವೇನೋ ಅರಣ್ಯದಲ್ಲಿ ಕಂದಮೂಲ ಫಲಾದಿಗಳನ್ನು ತಿನ್ನುತ್ತಿರುವ ಬಡ ಹಾರುವರೆಂದು ತಿಳಿದಿರುವರೇ? ಒಳ್ಳೇದು, ಈಗಲೇ ಆ ಪರೀಕ್ಷಿತನ ಗರ್ವವನ್ನು ಇಳಿಸುವೆನು" ಎಂದು ತನ್ನ ಕಮಂಡಲದಲ್ಲಿರುವ ನೀರನ್ನು ಕೈಯ್ಯಲ್ಲಿ ತೆಗೆದುಕೊಂಡು—"ಪರೀಕ್ಷಿತನೇ, ಇವತ್ತಿನಿಂದ ಏಳು ದಿವಸಗಳಲ್ಲಿ ನಿನಗೆ ತಕ್ಷಕಸರ್ಪ

ದಂಶವಾಗಿ ಸುಟ್ಟು ಹೋಗು" ಎಂದು ಶಾಪವನ್ನು ಕೊಟ್ಟನು. ಶಾಪಾನುಗ್ರಹಶಕ್ತರಾದ ಋಷಿಗಳ ಶಾಪವನ್ನು ತಪ್ಪಿಸುವದು ಹರಿಹರ ಬ್ರಹ್ಮಾದಿಗಳಿಗೂ ಕೂಡಾ ಅಸಾಧ್ಯವು. ಅಹಹ! ಕರ್ಮಭೋಗವು ಯಾರಿಗೂ ತಪ್ಪುವದಿಲ್ಲ.

ಇತ್ತ ಶಮೀಕ ಋಷಿಗಳು ತಮ್ಮ ಸಮಾಧಿಯನ್ನಿಳಿಸಿ ನೋಡುತ್ತಾರೆ. ತಮ್ಮ ಕೊರಳಲ್ಲಿ ದುರ್ಗಂಧಮಯವಾದ ಮೃತಸರ್ಪವು. ಆಗಲೇ ಅದನ್ನು ತೆಗೆದುಹಾಕಿ ಸ್ನಾನ ವನ್ನು ಮಾಡಿ ಪರೀಕ್ಷಿತರಾಜನು ತಮ್ಮ ಆಶ್ರಮಕ್ಕೆ ಬಂದು ಮಾಡಿದ ಅನುಚಿತ ಕಾರ್ಯ ವನ್ನೂ, ಶ್ರೀಂಗಿಯು ಅವನಿಗೆ ಶಾಪ ಕೊಟ್ಟದ್ದನ್ನೂ ತಮ್ಮ ಅಂತರ್ಜ್ಞಾನದಿಂದ ತಿಳಿದು ತಮ್ಮ ಮಗನಿಗೆ—"ತಮ್ಮಾ, ಕುರುಕುಲಕ್ಕೆ ದಿವಾಕರನಂತಿರುವ ಕ್ಷಮಾಶೀಲನಾದ ಪರೀ ಕ್ಷಿತರಾಜನಿಗೆ, ಏನೋ ಅರಿಯದೆ ಅಜ್ಞಾನದಿಂದ ಮಾಡಿದ ಸ್ವಲ್ಪ ಅಪರಾಧಕ್ಕಾಗಿ ಇಂತಿಹ ಘೋರ ಶಾಪವನ್ನು ಕೊಡಬಹುದೇ? ನೀನು ಬಹಳೇ ನಿಂದ್ಯ ಕೆಲಸವನ್ನು ಮಾಡಿ, ರಾಜಹಿಂಸಾಪಾಪವನ್ನು ಕಟ್ಟಿಕೊಂಡೆ? ಎಲಾ! ಯಾವ ಪ್ರಜಾಪಾಲಕನಾದ ಆ ಮಹಾ ರಾಜನ ಶೌರ್ಯಪ್ರತಾಪದಿಂದಲೇ ಅರಣ್ಯದಲ್ಲಿಯೂ ಕೂಡ ನಮ್ಮಂಥ ತಪಸ್ವಿಗಳ ಜಪ ತಪಾನುಷ್ಠಾನಗಳು ನಿರ್ವಿಘ್ನವಾಗಿ ನಡೆಯುವವೋ? ಯಾವನಿಂದ ಯಜ್ಞಯಾಗಾದಿ ಕರ್ಮಗಳು ನಡೆದು ಸುರಪತಿಯು ತೃಪ್ತನಾಗಿ ಈ ಭೂಮಿಯ ಮೇಲೆ ಮಳೆಯನ್ನು ಕೆಡ ಹಲು, ತೃಣಸಸ್ಯಾದಿಗಳು ಬೆಳೆದು ಗೋಬ್ರಾಹ್ಮಣರ ಸಂರಕ್ಷಣೆಯಾಗಿ ಸರ್ವ ಪ್ರಾಣಿಗಳು ಸುಖದಿಂದ ಜೀವಿಸುತ್ತಿರುವವೋ? ಅಂತಿಹ ದೇವಾಂಶಸಂಭೂತನಾದ ರಾಜನಿಗೆ ವ್ಯರ್ಥ ವಾಗಿ ಮರಣವನ್ನಿಚ್ಛಿಸಿದೆಯಾ? ಬಹಳೇ ನೀಚ ಕೆಲಸವನ್ನು ಮಾಡಿದೆ" ಎಂದು ಶಮೀಕ ಋಷಿಗಳು ತಮ್ಮ ಮಗನಿಗೆ ನಾನಾಪರಿಯಿಂದ ಸಿಟ್ಟುಮಾಡಲು, ಶ್ರೀಂಗಿಯು —"ಅಪ್ಪಾ, ಆದದ್ದು ಆಗಿ ಹೋಯಿತು. ಈಗ ನೀನು ಸಿಟ್ಟು ಮಾಡಿದರೆ ಆಗುವದೇನು? ಆ ರಾಜನ ಕರ್ಮಗತಿಯೇ ಹೀಗಿದ್ದರೆ ಅದನ್ನು ಬಿಡಿಸುವವರಾರು?" ಎಂದು ತಂದೆಯನ್ನು ಸಮಾ ಧಾನಪಡಿಸಿದನು.

ಆಗ ಶಮೀಕ ಋಷಿಗಳು ತಮ್ಮ ಮನಸ್ಸಿನಲ್ಲಿ—"ಒಳ್ಳೇದು, ಇನ್ನು ಹೇಗೆ ಮಾಡ ಬೇಕು? ಬ್ರಹ್ಮಶಾಪವಂತೂ ತಪ್ಪುವದಿಲ್ಲ; ಅಂದ ಮೇಲೆ ಈಗಲೇ ನನ್ನ ಶಿಷ್ಯನೊಬ್ಬನನ್ನು ಆ ರಾಜನ ಬಳಿಗೆ ಕಳುಹಿಸಿ ಅವನಿಗೆ ಶಾಪವೃತ್ತಾಂತವನ್ನು ತಿಳಿಸಲಿಕ್ಕೇ ಬೇಕು" ಎಂದು ಆಗಲೇ ತಮ್ಮ ಶಿಷ್ಯರಲ್ಲಿ ಒಬ್ಬನಾದ "ಗೌರಮುಖ" ಎಂಬುವನನ್ನು ಕರೆದು—'ಶಿಷ್ಯನೇ ನೀನು ಈಗಿಂದೀಗಲೆ ಹಸ್ತಿನಾಪುರಕ್ಕೆ ಹೋಗಿ ಪರೀಕ್ಷಿತರಾಜನಿಗೆ ಶಾಪ ಕೊಟ್ಟ ವೃತ್ತಾಂತ ವನ್ನು ತಿಳಿಸು' ಎಂದು ಹೇಳಿ ಕಳುಹಿಸಲು, ಅವನು ಕೂಡಲೆ ಹಸ್ತಿನಾಪುರಕ್ಕೆ ಬಂದು ಪರೀಕ್ಷಿತನ ಭೆಟ್ಟಿಯಾಗಿ ಅವನಿಗೆ ಆಶೀರ್ವಾದವನ್ನು ಮಾಡದೆ ಮೌನದಿಂದ ನಿಂತಿರಲು, ನೃಪತಿಯು ಎದ್ದು ಆ ಋಷಿಶಿಷ್ಯರಿಗೆ ಆಸನಾದ್ಯುಪಚಾರಗಳಿಂದ ಸತ್ಕರಿಸಿ—"ತಾವು ನನ್ನಲ್ಲಿಗೆ ದಯಮಾಡಿದ ಕಾರಣವೇನು?" ಎಂದು ಕೇಳಲು, ಆಗ ಗೌರಮುಖನು—

"ನೃಪಪುಂಗವನೇ, ನಾನು ಶಮೀಕ ಋಷಿಗಳ ಶಿಷ್ಯನು. ನೀನು ಮೃಗಯಾ ನಿಮಿತ್ತದಿಂದ ನಮ್ಮ ಗುರುಗಳ ಆಶ್ರಮಕ್ಕೆ ಬಂದು ತಪೋಬಲದಿಂದ ಸಾಕ್ಷಾತ ಬ್ರಹ್ಮಮೂರ್ತಿಯಾಗಿಯೂ ಮಹಾ ಪುಣ್ಯಾತ್ಮನಾಗಿಯೂ ಇರುವ ಆ ಶಮೀಕಋಷಿಗಳು ಧ್ಯಾನಸ್ಥರಾಗಿ ಕುಳಿತಿರುವ ವೇಳೆಯಲ್ಲಿ ಅವರ ಕೊರಳೊಳಗೆ ಮೃತಸರ್ಪವನ್ನು ಹಾಕಿ ಬಹಳೇ ಅನುಚಿತ ಕಾರ್ಯವನ್ನು ಮಾಡಿಬಿಟ್ಟೆ. ರಾಜನ್, ಏನು ಹೇಳಲಿ? ನೀನು ಆ ಆಶ್ರಮವನ್ನು ಬಿಟ್ಟು ಹೋದ ಮೇಲೆ ನಮ್ಮ ಗುರುಗಳ ಮಕ್ಕಳಾದ ಶ್ರೀಂಗಿಋಷಿಯು ಬಂದು ನೀನು ಮಾಡಿದ ಕೃತ್ಯವನ್ನು ನೋಡಿ, ಅವರು ನಿನಗೆ ಶಾಪಪ್ರದಾನವನ್ನು ಮಾಡಿದರು. ಅದೇನಂದರೆ, "ಇವತ್ತಿನಿಂದ ಏಳು ದಿವಸಗಳಲ್ಲಿ ತಕ್ಷಕನಿಂದ ದಂಶಿತನಾಗಿ ದಗ್ಧನಾಗು" ಎಂಬ ಶಾಪಕುಠಾರದಿಂದ ನಿನ್ನ ಆಯುಷ್ಯವೆಂಬ ವೃಕ್ಷವನ್ನೇ ಛೇದಿಸಿ ಬಿಟ್ಟರು. ಉಪಾಯವಿಲ್ಲ. ಆದರೂ ನಮ್ಮ ಗುರುಗಳು ನಿನ್ನ ಮೇಲೆ ಅನುಗ್ರಹವನ್ನು ಮಾಡಬೇಕೆಂದು ಮೊದಲೇ ಈ ಶಾಪವೃತ್ತಾಂತ ವನ್ನು ನಿನಗೆ ತಿಳಿಸುವದಕ್ಕಾಗಿ ನನ್ನನ್ನು ಕಳಿಸಿರುವರು. ಆ ನಮ್ಮ ಗುರುಪುತ್ರರ ಶಾಪ ವನ್ನು ತಪ್ಪಿಸುವದಕ್ಕೆ ಹರಿಹರ ಬ್ರಹ್ಮಾದಿಗಳಿಗೂ ಶಕ್ಯವಿಲ್ಲ; ಆದ್ದರಿಂದ ಆ ತಕ್ಷಕ ವಿಷ ಪರಿಹಾರಾರ್ಥವಾಗಿ ಅನೇಕ ಉಪಾಯಗಳನ್ನು ಮಾಡು; ನಿನ್ನ ಮೃತ್ಯುದೇವತೆಯು ಸಮೀ ಪಕ್ಕೆ ಬಂದಿರುವಳು. ಒಂದು ಅರಕ್ಷಣವಾದರೂ ವೇಳೆಯನ್ನು ಕಳೆಯಬೇಡ, ಏಳು" ಎಂದು ಹೇಳಿ ಗೌರಮುಖನು ಹೊರಡಲುದ್ಯುಕ್ತನಾಗಲು, ಶಮೀಕಋಷಿ ಶಿಷ್ಯರ ಮಾತು ಗಳನ್ನು ಕೇಳಿದ ಕೂಡಲೆ ಪರೀಕ್ಷಿತನು ಸಿಡಿಲಿನಿಂದ ಬಡೆಯಲ್ಪಟ್ಟ ವೃಕ್ಷದಂತೆ ಭೂಮಿಯ ಮೇಲೆ ಮೂರ್ಛಾಂಗತನಾಗಿ, ಪುನಃ ಚೇತರಿಸಿಕೊಂಡು ಎದ್ದು, ಗೌರಮುಖನ ಪಾದಗಳನ್ನು ಘಟ್ಟಿಯಾಗಿ ಹಿಡಿದು—"ಅಯ್ಯೋ! ರಾಜನೀತಿಯನ್ನು ಬಲ್ಲವನಾದ ನಾನು ಎಂತಹ ನೀಚಕೃತ್ಯವನ್ನು ಮಾಡಿ ಋಷಿಗಳ ಶಾಪಕ್ಕೆ ಒಳಗಾದೆನಲ್ಲ? ಹಾ! ವಿಧಿಯೇ, ಬ್ರಾಹ್ಮ ಣರೇ ನನ್ನ ದೈವತವೆಂದು ಇಂದಿನವರೆಗೆ ನಾನು ಭಯಭಕ್ತಿಯಿಂದ ನಡೆದು, ಕಡೆಯಲ್ಲಿ ಬ್ರಹ್ಮಾವಮಾನವೆಂಬ ಅಗ್ನಿಯನ್ನು ನನ್ನ ಶರಗಿನೊಳಗೆ ಕಟ್ಟಿಕೊಂಡೆನು. ನನ್ನ ವಿನಾಶ ಕಾಲವು ಬಂದೊದಗಿದ್ದರಿಂದ ನನ್ನ ಬುದ್ಧಿಯು ವಿಪರೀತವಾಗಿ ಇಂತಹ ಅನರ್ಥವನ್ನು ತಂದುಕೊಂಡೆನು. ಹಾ! ಉಪಾಯವಿಲ್ಲ. ಋಷಿಶಿಷ್ಯರೇ, ನಿಮ್ಮ ಗುರುಗಳಿಗೆ ನಾನು ಭಯಂಕರವಾದ ಅಪರಾಧವನ್ನು ಮಾಡಿದ್ದು ನಿಜವು. ಅದಕ್ಕೆ ಗುರುಪುತ್ರರು ನನ್ನ ಅಪ ರಾಧಕ್ಕೆ ಇಷ್ಟೇ ಶಾಸನವನ್ನು ಮಾಡಿದ್ದೊಂದು ನನ್ನ ಸುದೈವವೆಂದು ತಿಳಿಯುತ್ತೇನೆ. ಇದಕ್ಕೂ ಹೆಚ್ಚಿನ ಶಾಪವನ್ನು ಕೊಟ್ಟಿದ್ದರೆ ನಾನೇನು ಮಾಡುತ್ತಿದ್ದೆ? ಶಮೀಕ ಋಷಿಗಳು ನನ್ನ ಮೇಲೆ ಅನುಗ್ರಹವನ್ನು ಮಾಡಿ ನನಗೆ ಬಂದಿರುವ ಶಾಪವೃತ್ತಾಂತವನ್ನು ತಿಳಿಸಿದ್ದಕ್ಕೆ ಅವರು ನನ್ನ ಮೇಲೆ ಮಹದುಪಕಾರವನ್ನು ಮಾಡಿದಂತಾಯಿತು. ಋಷಿಶಿಷ್ಯರೇ, ನಾನು ಇಹದಲ್ಲಿ ಸರ್ಪದಂಶವಾಗಿ ಮರಣ ಹೊಂದಿದರೂ ಚಿಂತೆ ಇಲ್ಲ; ಆದರೆ ಪರಲೋಕದಲ್ಲಿ ಮಾತ್ರ ನನಗೆ ಯಾವ ಪಾಪವೂ ಹತ್ತದಂತೆ ನನ್ನ ಮೇಲೆ ಅನುಗ್ರಹವನ್ನು ಮಾಡಬೇ ಕೆಂದು ಅವರ ಪಾದಗಳಿಗೆ ಸಹಸ್ರಾವರ್ತಿ ನಮಸ್ಕಾರವನ್ನು ಮಾಡಿ ನಾನು ವಿಜ್ಞಾಪನೆ

ಯನ್ನು ಮಾಡಿಕೊಳ್ಳುವೆನೆಂತಲೂ, ಮತ್ತು ನಾನು ಮಾಡಿದ ಅಪರಾಧಕ್ಕೆ ನನಗೆ ಬಹಳೇ ಪಶ್ಚಾತ್ತಾಪನಾಗಿರುವವರಿಂದ ಅವರಿಗೆ ಕ್ಷಮೆಯನ್ನು ಬೇಡಿಕೊಳ್ಳುವೆನೆಂತಲೂ ಹೇಳಿರಿ" ಎಂದು ರಾಜನು ದುಃಖಾಶ್ರುಗಳಿಂದಲೇ ಅವರ ಪಾದಗಳನ್ನು ತೊಳೆದು, ಕೈ ಮುಗಿದು ಅವರಿಗೆ ಹೋಗುವದಕ್ಕೆ ಅಪ್ಪಣೆ ಕೊಟ್ಟನು. ಆಗಲಾ ಗೌರಮುಖನು—"ರಾಜನೇ ಮೊದಲು ಅಪರಾಧವನ್ನು ಮಾಡಿ ಆ ಮೇಲೆ ಪಶ್ಚಾತ್ತಾಪಪಟ್ಟರೆ ಆಗುವದೇನು? ಆದರೂ ನಮ್ಮ ಗುರುಗಳು ಹೇಳಿದ ಪ್ರಕಾರ ಈಗಿನಿಂದಲೇ ನೀನು ಏನಾದರೂ ಉಪಾಯವನ್ನು ಮಾಡು" ಎಂದು ಹೇಳಿ ಗೌರಮುಖನು ತನ್ನ ಆಶ್ರಮಕ್ಕೆ ಹೊರಟು ಹೋದನು.

---

## ೨ನೆಯ ಅಧ್ಯಾಯ.

# ಭಾಗವತ ಶ್ರವಣ.



ಶಮೀಕ ಋಷಿಶಿಷ್ಯನು ರಾಜಾಧಿರಾಜನಾದ ಪರೀಕ್ಷಿತನಿಗೆ ಶಾಪವೃತ್ತಾಂತವನ್ನು ತಿಳಿಸಿ ಹೊರಟು ಹೋಗಲು, ಇತ್ತ ರಾಜನು ಸಭಾಸ್ಥಾನಕ್ಕೆ ಬಂದು ಮಂತ್ರಿ, ಸಾಮಂತ, ಸೇನಾಪತಿ, ಪುರೋಹಿತ ಮೊದಲಾದವರನ್ನೂ ಮತ್ತು ಪ್ರಮುಖರಾದ ಪುರಜನರನ್ನೂ ಕರೆಸಿ, ತಾನು ಶಮೀಕ ಋಷಿಗಳಿಗೆ ಮಾಡಿದ ಅಪಮಾನವನ್ನೂ, ಋಷಿಪುತ್ರರಿಂದ ತನಗೆ ಬಂದಿರುವ ಶಾಪವನ್ನೂ ತಿಳಿಸಿ—"ಇನ್ನು ಮುಂದೆ ಇದಕ್ಕೆ ಹೇಗೆ ಮಾಡಬೇಕು? ಎಲೈ ಮಂತ್ರಿ ಮೊದಲಾದವರೇ ಆ ತಕ್ಷಕನ ಬಾಧೆಯು ಆಗಬಾರದೆಂಬುವದಕ್ಕೆ ನಾನು ಯಾವ ತೀರ್ಥಯಾತ್ರೆಯನ್ನು ಮಾಡಲಿ? ಯಾವ ಸತ್ಪುರುಷರು ಭೆಟ್ಟಿಯಾಗಿ ನನಗೆ ಬರುವ ಅರಿಷ್ಟವನ್ನು ಪರಿಹಾರ ಮಾಡುವರು? ತಕ್ಷಕನ ವಿಷವನ್ನು ಇಳಿಸುವಂಥ ಯಾವ ಧನ್ವಂತರಿಯು ನನಗೆ ದರ್ಶನವನ್ನು ಕೊಟ್ಟಾನು? ಯಾವ ಆಪದ್ಬಾಂಧವರು ನನಗೆ ಬರುವ ಸಂಕಟದೊಳಗಿಂದ ಸಂರಕ್ಷಣೆಯನ್ನು ಮಾಡುವರು? ಯಾವ ದೇವರ ಮರೆ ಹೊಕ್ಕರೆ ನಾನು ಈ ಮೃತ್ಯುಭಯದಿಂದ ಪಾರಾಗುವೆನು? ಮಂತ್ರಿ ಮೊದಲಾದವರೇ, ಹೇಳಿರಿ; ಇದಕ್ಕೇನು ಉಪಾಯವನ್ನು ಮಾಡಬೇಕು? ವ್ಯರ್ಥವಾಗಿ ಬ್ರಾಹ್ಮಣನಿಗೆ ಅಪಮಾನವನ್ನು ಮಾಡಿ ನನ್ನ ಮೇಲೆ ನಾನೇ ಅನರ್ಥವನ್ನು ತಂದುಕೊಂಡೆನು. ಹಾ! ವಿಧಿಯೇ. ನನ್ನ ಲಲಾಟದಲ್ಲಿ ನೀನು ಹೀಗೆಯೇ ಬರೆದಿರುವೆಯಾ? ಅಯ್ಯೋ! ನನಗೆ ರಾಜೈಶ್ವರ್ಯವು ಬೇಡ, ಈಗಲೇ ನಾನು ವನಕ್ಕೆ

ಹೋಗುವೆನು" ಎಂದು ಎದ್ದು ನಿಂತು, ಸುತ್ತು ಮುತ್ತು ನೋಡಿ ಹುಚ್ಚು ಹಿಡಿದವನಂತೆ, "ಅಯ್ಯೋ! ನನ್ನನ್ನು ಕಡೆಯುವದಕ್ಕೆ ಅಕೋ ನೋಡು, ತಕ್ಷಕನು ಬಂದನು; ಇನ್ನೇನು ಮಾಡಲಿ? ಈಗಲೇ ನಾನು ಸತ್ತು ಹೋಗುವೆನು. ಬೇಗನೇ ನನ್ನನ್ನು ತೆಗೆದುಕೊಂಡು ಹೋಗಿ ಯಾವನಾದರೂ ಭಗವದ್ಭಕ್ತನ ಪಾದಗಳ ಮೇಲಾದರೂ ಕೆಡಹಬಾರದೇ? ಅವ ರಾದರೂ ನನ್ನ ಜೀವವನ್ನು ಉಳಿಸಿಕೊಂಡಾರು?" ಎಂದು ಪರೀಕ್ಷಿತನು ದುಃಖದಿಂದ ಬಡಬಡಿಸಹತ್ತಿದನು.

ಈ ಜಗತ್ತಿನಲ್ಲಿ ಮೊದಲು ಜನರು ದುಷ್ಟ ಕೃತ್ಯಗಳನ್ನು ಮಾಡುವಾಗ್ಗೆ ಹೀಗೆ ಮಾಡಿದರೆ ನಮ್ಮ ಅವಸ್ಥೆಯೇನಾದೀತೆಂದು ತಿಳಿಯದೆ ಮಾಡಿ, ಹಿಂದಿನಿಂದ ದುಃಖಕ್ಕೆ ಗುರಿಯಾಗುವರು. ಆ ಮೇಲೆ ಪಶ್ಚಾತ್ತಾಪಪಟ್ಟರೆ ಆಗುವದೇನು? ಇರಲಿ. ಆಗ ಮಂತ್ರಿಯು ಕೈ ಜೋಡಿಸಿ—"ರಾಜನ್, ಹೀಗೆ ಕಷ್ಟಪಡಬಾರದು. ತಕ್ಷಕನ ವಿಷವನ್ನು ಪರಿಹಾರ ಮಾಡುವಂಥ ಜಾಣರಾದ ಮಾಂತ್ರಿಕರು ಈ ಜಗತ್ತಿನಲ್ಲಿ ಅನೇಕರು ಇರುವರು. ಈಗಲೇ ನೀವು ಹೀಗೆ ಗಾಬರಿಯಾದರೆ ಮುಂದೇನು ಗತಿಯು? ತಕ್ಷಕನು ನಿಮಗೆ ಕಡಿ ಯುವ ಅವಧಿಯು ಇನ್ನೂ ಏಳು ದಿವಸಗಳು ಇರುವದಲ್ಲವೇ? ಶೇವಕರನ್ನು ಕಳಿಸಿ, ಮಂತ್ರೌಷಧವನ್ನು ಬಲ್ಲಂಥ ವಿದ್ಯಾವಂತರನ್ನು ಕರೆಸುವೆನು. ನಿಮ್ಮ ಚಿಂತೆಯನ್ನು ಪರಿ ತ್ಯಾಗ ಮಾಡಿ ಸ್ವಸ್ಥವಾಗಿ ಇರ್ರಿ" ಎಂದು ರಾಜನನ್ನು ಸಮಾಧಾನ ಮಾಡಿದನು.

ಅಷ್ಟರಲ್ಲಿ ದೈವಯೋಗದಿಂದ ಬ್ರಹ್ಮದೇವರ ಮಾನಸಪುತ್ರರಾದ ನಾರದ ಋಷಿಗಳು ಸಭಾಸ್ಥಾನಕ್ಕೆ ಅಕಸ್ಮಾತ್ತಾಗಿ ಪ್ರಾಪ್ತರಾಗಲು, ಬ್ರಹ್ಮತೇಜಸ್ಸಿನಿಂದ ಪ್ರತಿಸೂರ್ಯನಂತೆ ಪ್ರಕಾಶಿಸುತ್ತಿರುವ ಅವರನ್ನು ನೋಡಿದಾಕ್ಷಣವೇ ಪರೀಕ್ಷಿತನು ತನ್ನ ಸಿಂಹಾಸನದಿಂದ ಧಿಗ್ಗನೇ ಎದ್ದು ಬಂದು, ಅವರ ಪಾದಗಳನ್ನು ಘಟ್ಟಿಯಾಗಿ ಹಿಡಿದು, ತನ್ನ ದುಃಖಾಶ್ರು ಗಳಿಂದಲೇ ಅವರ ಪಾದಗಳನ್ನು ತೊಳೆದು ಹಸ್ತಗಳನ್ನು ಜೋಡಿಸಿ—"ಮಹನ್, ತಾವು ನನ್ನಲ್ಲಿಗೆ ಅಕಸ್ಮಾತ್ತಾಗಿ ಬಂದದ್ದು ನನ್ನ ಸುದೈವವೆಂದು ತಿಳಿಯುತ್ತೇನೆ. ನಾರದ ಋಷಿ ಗಳೇ, ಈಗ ನನಗೆ ಬಂದಿರುವ ಆಪತ್ತನ್ನು ಏನು ಹೇಳಲಿ? "ಇನ್ನು ಏಳು ದಿವಸಗಳಲ್ಲಿ ತಕ್ಷಕನಿಂದ ದಂಶಿತನಾಗಿ ದಗ್ಧನಾಗು" ಎಂದು ಶ್ರೀಂಗಿಋಷಿಗಳು ನನಗೆ ಶಾಪವನ್ನು ಕೊಟ್ಟಿರುವರು. ಇದಕ್ಕೆ ಹೇಗೆ ಮಾಡಬೇಕು? ಮರಣಕ್ಕಾಗಿ ಭಯಪಟ್ಟರೆ ಆಗುವ ದೇನು? ಅಲ್ಪಾವಧಿಯಲ್ಲಿಯೇ ನನ್ನ ದೇಹವು ಹೇಗೆ ಸಾರ್ಥಕವನ್ನು ಹೊಂದೀತು? ಎಂಬ ಚಿಂತೆಯು ಮಾತ್ರ ಉತ್ಪನ್ನವಾಗಿರುವದು; ಆದ್ದರಿಂದ ಪ್ರಾಜ್ಞರಾದ ನೀವು ನನ್ನ ಉದ್ಧಾರವು ಹೇಗಾದೀತೆಂಬುವದನ್ನು ಹೇಳಬೇಕೆ" ಎಂದು ಬೇಡಿಕೊಳ್ಳಲು, ಅವಕ್ಕೆ ನಾರದರು—"ರಾಜನೇ, ಇದಕ್ಕಾಗಿ ನೀನು ಇಷ್ಟೊಂದು ಆಲೋಚನೆಯನ್ನು ಏಕೆ ಮಾಡುವೆ? ಖಟ್ವಾಂಗರಾಜನಿಗೆ ಮರಣ ಕಾಲವು ಮೂರು ಮುಹೂರ್ತ ಮಾತ್ರವೇ ಉಳಿದಿದ್ದರೂ ಅಷ್ಟೇ ವೇಳೆಯಲ್ಲಿಯೇ ಹರಿಪದವನ್ನು ಹೊಂದಿ, ತನ್ನ ದೇಹವನ್ನು

ಸಾರ್ಥಕ ಮಾಡಿಕೊಂಡನು. ನಿನಗಾದರೋ ಮರಣಾವಧಿಯು ಇನ್ನೂ ಏಳು ದಿವಸ ಉಳಿದಿರುವದು; ಅಂದ ಮೇಲೆ ನಿನ್ನ ದೇಹವನ್ನು ಸಾರ್ಥಕ ಮಾಡಿಕೊಳ್ಳುವದೆಂದರೆ ಏನು ಅಸಾಧ್ಯವು? ಆದ್ದರಿಂದ ಈಗಲೇ ನೀನು ಯೋಗಿಗಳಲ್ಲಿ ಚೂಡಾರತ್ನದಂತಿರುವ ವ್ಯಾಸಪುತ್ರರಾದ ಶುಕಾಚಾರ್ಯರನ್ನು ಸ್ಮರಣೆ ಮಾಡು; ಅಂದರೆ ಆ ಕ್ಷಣದಲ್ಲಿಯೇ ಪ್ರಾಪ್ತರಾಗಿ ನಿನಗೆ ದರ್ಶನವನ್ನು ಕೊಡುವರು. ಅವರಿಂದ ಭಾಗವತ ಪುರಾಣವನ್ನು ಶ್ರವಣ ಮಾಡು; ಅಂದರೆ ಏಳೇ ದಿವಸಗಳಲ್ಲಿಯೇ ನಿನ್ನ ಜನ್ಮವು ಸಾರ್ಥಕವಾಗಿ ಮೋಕ್ಷಪದವನ್ನು ಹೊಂದುವೆ" ಎಂದು ಹೇಳಿ ನಾರದ ಋಷಿಗಳು ಹೊರಟು ಹೋದರು.

ಇತ್ತ ಪರೀಕ್ಷಿತನು ಮನಸ್ಸಿನಲ್ಲಿ ಸಮಾಧಾನವನ್ನು ಹೊಂದಿ ನಾರದಋಷಿಗಳ ಆಜ್ಞಾನುಸಾರವಾಗಿ ಶುಕಾಚಾರ್ಯರನ್ನು ಆಗಲೇ ಸ್ಮರಣೆ ಮಾಡಲು, ಭಾಸ್ಕರನಂತೆ ಪ್ರಕಾಶಿಸುತ್ತ ಹದಿನಾರು ವರ್ಷದ ಪ್ರಾಯದವರಾಗಿಯೂ, ಗೌರವರ್ಣದಿಂದ ಝಗಝಗಿಸುವ ದೇಹಕಾಂತಿಯುಳ್ಳವರಾಗಿಯೂ, ಮನ್ಮಥನನ್ನು ತಿರಸ್ಕರಿಸುವ ಸುಂದರವಾದ ರೂಪದಿಂದ ಯುಕ್ತರಾಗಿಯೂ, ಆಕರ್ಣವಾದ ನೇತ್ರಗಳಿಂದ ಸುಹಾಸ್ಯಮುಖವುಳ್ಳವರಾಗಿಯೂ, ಕಾಮ-ಕ್ರೋಧಾದಿಗಳನ್ನು ಸುಟ್ಟು ಕಾಮಾತುರದಿಂದ ಬಂದು ಕಾಡಿದ ರಂಭೆ ಎಂಬ ಅಪ್ಸರೆಯನ್ನು ನಿರಾಕರಿಸಿದವರಾಗಿಯೂ ಇರುವ ಶುಕಾಚಾರ್ಯರು ತನ್ನ ಕಕ್ಷದಲ್ಲಿ ಭಾಗವತ ಪುಸ್ತಕವನ್ನು ಇಟ್ಟುಕೊಂಡು ಪರೀಕ್ಷಿತರಾಜನ ಮುಂದೆ ಬಂದು ನಿಂತುಕೊಂಡರು. ಆಗ ರಾಜನು ಅವರ ದರ್ಶನಮಾತ್ರದಿಂದಲೇ ಪರಮಸಂತೋಷವನ್ನು ಹೊಂದಿ, ಅವರ ಪಾದಗಳನ್ನು ಘಟ್ಟಿಯಾಗಿ ಹಿಡಿದು "ಸ್ವಾಮಿನ್ ತಮ್ಮ ದರ್ಶನದಿಂದ ಧನ್ಯನಾದೆನು. ಈಗ ನಾನು ಶ್ರೀಂಗಿಋಷಿಗಳಿಂದ ಶಾಪಗ್ರಸ್ತನಾಗಿ ಏಳು ದಿವಸಗಳಲ್ಲಿಯೇ ನನಗೆ ತಕ್ಷಕನಿಂದ ಮರಣವು ಸಂಭವಿಸುವದು. ಆದ ಕಾರಣ ತಾವು ನನಗೆ ಏಳು ದಿವಸಗಳಲ್ಲಿಯೇ ಸಂಪೂರ್ಣ ಭಾಗವತ ಪುರಾಣವನ್ನು ಶ್ರವಣ ಮಾಡಿಸಿ ನನ್ನನ್ನು ಉದ್ಧಾರ ಮಾಡಬೇಕು" ಎಂದು ಬೇಡಿಕೊಳ್ಳಲು, ಅದಕ್ಕೆ ಶುಕಾಚಾರ್ಯರು—"ನೃಪಪುಂಗವನೇ, ನಿನ್ನ ಅಭಿಪ್ರಾಯದಂತೆ ನಾನು ಭಾಗವತ ಪುರಾಣವನ್ನು ಶ್ರವಣ ಮಾಡಿಸುವದಕ್ಕೆ ಸಿದ್ಧನಾಗಿರುವೆನು; ಆದರೆ ಈಗ ನೀನು ತಕ್ಷಕ ಸರ್ಪಭಯದಿಂದ ಗ್ರಸ್ತನಾಗಿರುವ ಕಾರಣ ನಿನ್ನ ಮನಸ್ಸು ವ್ಯಗ್ರವಾಗಿ ಕ್ಷಣಕ್ಷಣಕೆ 'ತಕ್ಷಕ ತಕ್ಷಕ' ಎಂದು ಬಡಬಡಿಸುತ್ತಿರುವೆ. ಪುರಾಣ ಶ್ರವಣ ಮಾಡಬೇಕಾದರೆ ಮನಸ್ಸು ಸ್ಥಿರವಾಗಿರಲಿಕ್ಕೆ ಬೇಕು. ಆದಕಾರಣ ನಿನ್ನ ಮನಸ್ಸು ಚಂಚಲವಾಗದಂತೆ ಸರ್ಪಭಯಕ್ಕೆ ಆಸ್ಪದವಾಗದ ಹಾಗೆ ಒಂದು ಸ್ಥಳವನ್ನು ನಿರ್ಮಾಣ ಮಾಡು; ಮತ್ತು ಸ್ಥಿರಮನಸ್ಸಿನಿಂದ ಶುಚಿರ್ಭೂತನಾಗಿ ಉಪವಾಸ ವ್ರತದಿಂದ ಕುಳಿತುಕೋ; ಅಂದರೆ ಆಗಲೇ ನಾನು ಪುರಾಣವನ್ನು ಪ್ರಾರಂಭ ಮಾಡುವೆನು" ಎಂದು ಹೇಳಲು, ಪರೀಕ್ಷಿತನು ಆ ಮಾತಿಗೆ ಒಪ್ಪಿ ಕೂಡಲೆ ಒಂದು ಗಗನಚುಂಬಿತವಾದ ಲೋಹಸ್ತಂಭವನ್ನು

ನಿಲ್ಲಿಸಿ, ಅದರ ಮೇಲೆ ಒಂದು ಮನೆಯನ್ನು ನಿರ್ಮಾಣ ಮಾಡಿ ಅದರಲ್ಲಿ ಶುಕಾಚಾರ್ಯರೂ ತಾನೂ ಕುಳಿತುಕೊಂಡು ಚಿತ್ತಶುದ್ಧಿಯಿಂದ ಹರಿಪದಗಳಲ್ಲಿಯೇ ತನ್ನ ಮನಸ್ಸನ್ನು ಸ್ಥಿರ ಪಡಿಸಿ ಭಾಗವತ ಪುರಾಣವನ್ನು ಕೇಳುವದಕ್ಕೆ ಪ್ರಾರಂಭ ಮಾಡಿದನು. ಆ ಲೋಹ ಸ್ತಂಭದ ಸುತ್ತುಮುತ್ತು ಅನೇಕರಾದ ಬ್ರಾಹ್ಮಣರು ಕುಳಿತುಕೊಂಡು ತಕ್ಷಕನು ಆ ಕಂಭದ ಸಮೀಪಕ್ಕೆ ಸಹ ಬರಬಾರದೆಂದು ಸುಪರ್ಣಸೂಕ್ತವನ್ನು ಪಠಣ ಮಾಡುತ್ತಿದ್ದರು. ಮತ್ತು ಆ ಲೋಹಸ್ತಂಭಕ್ಕೆ ಅನೇಕ ಮಾಂತ್ರಿಕರ ಕೈಯ್ಯಿಂದ ಸಿದ್ಧ ಮಾಡಲ್ಪಟ್ಟ ಯಂತ್ರ ಗಳನ್ನು ಬಂಧಿಸಿದ್ದರು; ಇದಲ್ಲದೆ ಸೈನ್ಯದಿಂದ ಸಹಿತನಾಗಿ ಮಂತ್ರಿಯು ಹಗಲೂ ಇರುಳೂ ಕಾಯುತ್ತಲಿದ್ದನು. ಹೀಗೆ ಸರ್ವ ರೀತಿಯಿಂದ ಪರೀಕ್ಷಿತರಾಜನು ರಕ್ಷಿಸಲ್ಪಟ್ಟವನಾಗಿ ಸಿರಚಿತ್ತದಿಂದ ಹದಿನೆಂಟು ಸಾವಿರ ಶ್ಲೋಕಗಳಿಂದ ಯುಕ್ತವಾದ ಭಾಗವತ ಪುರಾಣವನ್ನು ಕೇಳುತ್ತಿದ್ದನು.

---

## ೩ನೆಯ ಅಧ್ಯಾಯ.

## ರಾಜಮರಣ.



ಹೀಗೆ ಪರೀಕ್ಷಿತರಾಜನು ತದೇಕಚಿತ್ತದಿಂದ ಶುಕಾಚಾರ್ಯರು ಹೇಳುತ್ತಿರುವ ಭಾಗವತ ಪುರಾಣದೊಳಗಿನ ಶ್ರೀಹರಿಲೀಲೆಯನ್ನು ಕೇಳುತ್ತಿದ್ದನು. ಇತ್ತ ರಾಜಾಜ್ಞೆಯಂತೆ ಮಂತ್ರಿಯು ತಕ್ಷಕ ವಿಷವನ್ನಿಳಿಸುವ ಮಾಂತ್ರಿಕರನ್ನೂ, ವೈದ್ಯರನ್ನೂ ಶೋಧ ಮಾಡುವದಕ್ಕಾಗಿ ದೂರ ದೂರ ದೇಶಗಳಿಗೆ ಸೇವಕನನ್ನು ಕಳಿಸಿದ್ದರು. ಆ ವರ್ತಮಾನವನ್ನು ಕೇಳಿ ಎಷ್ಟೋ ಜನ ಮಾಂತ್ರಿಕರೂ, ವೈದ್ಯರೂ ಹಸ್ತಿನಾಪುರಕ್ಕೆ ಬಂದು ಮಂತ್ರಿಯನ್ನು ಕಂಡು ರಾಜಧಾನಿಯಲ್ಲಿಯೇ ಮಾರ್ಗನಿರೀಕ್ಷಣ ಮಾಡುತ್ತ ಇರುತ್ತಿದ್ದರು. ಹೀಗೆ ದೇಶದೇಶಗಳಲ್ಲಿ ವರ್ತಮಾನವು ಹಬ್ಬುತ್ತಿರಲು, ವಾರಣಾಶೀ ಪಟ್ಟಣದಲ್ಲಿ ಸರ್ಪವಿಷವನ್ನು ಪರಿಹರಿಸುವ ವಿದ್ಯೆಯಲ್ಲಿ ಪರಮನಿಪುಣನಾದ ಕಶ್ಯಪನೆಂಬ ಬ್ರಾಹ್ಮಣನು ಈ ವರ್ತಮಾನವನ್ನು ಕೇಳಿ, "ತನ್ನ ವಿದ್ಯೆಯನ್ನು ರಾಜನಿಗೆ ತೋರಿಸಿದರೆ ಅವನಿಂದ ಅಪರಿಮಿತ ದ್ರವ್ಯವು ಸಿಗುವದಲ್ಲದೆ ಅವನನ್ನು ರಕ್ಷಿಸಿದ ಪುಣ್ಯವು ಸಹ ಬರುವದು" ಎಂದು ಆ ಕಶ್ಯಪನು ಹಸ್ತಿನಾಪುರದ ಮಾರ್ಗವಿಡಿದು ಬರುತ್ತಿದ್ದನು.

ಇತ್ತ ಪರೀಕ್ಷಿತನ ಮರಣಕಾಲವು ಸಮೀಪಕ್ಕೆ ಬರುತ್ತಿರಲು, ಋಷಿಶಾಪಕ್ಕನುಸರಿಸಿ ಪಾತಾಳಲೋಕದಲ್ಲಿರುವ ತಕ್ಷಕನು ಅವನನ್ನು ಕಡಿದು ಸಂಹರಿಸುವದಕ್ಕಾಗಿ ಅಲ್ಲಿಂದ ಹೊರಟು, ಇದೇ ಭಯಂಕರವಾದ ರೂಪದಿಂದ ಹೋದರೆ ಏನಾದರೂ ವಿಘ್ನವು ಒದಗಬಹುದೆಂದು ಆಲೋಚಿಸಿ. ಆ ಕ್ಷಣವೇ ಅವನು ಸತ್ವಶಾಲಿಯಾದ ಬ್ರಾಹ್ಮಣನ ರೂಪವನ್ನು ಧರಿಸಿ, ಹಸ್ತಿನಾಪುರಕ್ಕೆ ಬರುತ್ತಿದ್ದನು. ಇತ್ತ ಹಿಂದೆ ಹೇಳಿದ ಕಶ್ಯಪನಾದರೂ ಅದೇ ಮಾರ್ಗವಿಡಿದು ಹಸ್ತಿನಾಪುರಕ್ಕೆ ಬರುತ್ತಿರುವಾಗ ಮಾರ್ಗದಲ್ಲಿ ಅವರಿಬ್ಬರೂ ಕೂಡಿದರು. ಆಗ ಕಪಟ ವೇಷಧಾರಿಯಾದ ತಕ್ಷಕನು ಕಶ್ಯಪನ ತೇಜಸ್ಸನ್ನೂ ಗಾಂಭೀರ್ಯವನ್ನೂ ನೋಡಿ ತನ್ನ ಮನಸ್ಸಿನಲ್ಲಿ—"ಇವನೇನಾದರೋ ಮಾಂತ್ರಿಕನಿರಬಹುದೋ ಏನೋ?" ಎಂಬ ಸಂಶಯ ಹುಟ್ಟಿ ಅವನಿಗೆ—"ಎಲೈ ಬ್ರಾಹ್ಮಣನೇ, ನೀನು ಯಾರು? ನಿನ್ನ ದೇಶ ವ್ಯಾವದು? ನಿನ್ನನ್ನು ನೋಡಿದರೆ ಸರ್ಪವಿಷವನ್ನು ಪರಿಹರಿಸುವ ಮಂತ್ರೌಷಧಗಳನ್ನು ಬಲ್ಲವನಂತೆ ನಿನ್ನ ಮುಖಚರ್ಯದಿಂದ ಕಂಡು ಬರುತ್ತದೆ. ಈಗೇನಾದರೂ ನೀನು ಹಸ್ತಿನಾಪುರಕ್ಕೆ ಹೋಗುತ್ತಿರುವಿಯೋ ಹೇಗೆ?" ಎಂದು ಕಶ್ಯಪನನ್ನು ಕೇಳಲು, ಅವನು—"ಬ್ರಾಹ್ಮಣನೇ, ನಾನು ವಾರಣಾಶಿಯಿಂದ ಬಂದೆನು, ನನ ಹೆಸರು ಕಶ್ಯಪನು, ಹಸ್ತಿನಾಪುರಕ್ಕೆ ಹೊರಟಿರುವೆನು. ಅಲ್ಲಿ ಕುರುಕುಲಾವತಂಸನಾದ ಪರೀಕ್ಷಿತರಾಜನಿಗೆ ತಕ್ಷಕನೆಂಬ ಸರ್ಪವು ಕಡಿದು ಮರಣವನ್ನು ಹೊಂದುವನೆಂದು ಒಬ್ಬ ಋಷಿಯು ಶಾಪವನ್ನು ಕೊಟ್ಟಿರುವನಂತೆ; ಅದಕ್ಕಾಗಿ ಅಲ್ಲಿಗೆ ಹೋಗುವೆನು. ಹಾವಿನ ವಿಷದ ಮೇಲೆ ನಾನು ಮಂತ್ರೌಷಧವನ್ನು ಬಲ್ಲೆನು. ಅದೆಂತಿಹ ತಕ್ಷಕವೋ? ಅದರ ವಿಷಸಾಮರ್ಥ್ಯವೆಷ್ಟೋ? ಅದನ್ನು ನೋಡುವೆನು. ಬರೇ ಒಬ್ಬ ತಕ್ಷಕನೇಕೆ? ಅಂತಿಹ ಸಹಸ್ರ ತಕ್ಷಕಗಳು ಒಂದೇ ಕಾಲಕ್ಕೆ ರಾಜನನ್ನು ಕಚ್ಚಲಿ, ಆಗಲೇ ನನ್ನ ಮಂತ್ರಬಲದಿಂದ ಅವನನ್ನು ರಕ್ಷಿಸುವೆನು. ಈ ನನ್ನ ವಿದ್ಯೆಯನ್ನು ತೋರಿಸಿ, ಅವನ ಜೀವವನ್ನು ರಕ್ಷಿಸಿ ಅವನಿಂದ ಅಪರಿಮಿತ ದ್ರವ್ಯವನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯಿಂದಲೇ ಹೊರಟಿರುವೆನು" ಎಂದು ಯಾವ ಕಪಟವನ್ನರಿಯನೆ ಹೇಳಲು, ಅದಕ್ಕೆ ಬ್ರಾಹ್ಮಣ ವೇಷಧಾರಿಯಾದ ತಕ್ಷಕನು ತನ್ನ ಮನಸ್ಸಿನಲ್ಲಿ—"ಈ ಬ್ರಾಹ್ಮಣನ ಮಾತಿನ ಮೇಲಿಂದ ನೋಡಲಾಗಿ ಇವನೇನಾದರೋ ಕಾರ್ಯವನ್ನು ಸಾಧಿಸುವನೆಂದು ನನಗೆ ತೋರುತ್ತದೆ. ಒಳ್ಳೇದು, ನನ್ನ ಸ್ವರೂಪವನ್ನು ಇವನಿಗೆ ತಿಳಿಸಿ ಇವನ ಮಂತ್ರಬಲವನ್ನು ಪರೀಕ್ಷಿಸಿ ನೋಡಲಿಕ್ಕೇ ಬೇಕು" ಎಂದು ಆಲೋಚಿಸಿ—"ಕಶ್ಯಪನೇ ನಾನೇ ತಕ್ಷಕನು. ಮಹಾರಾಜನನ್ನು ಕಡೆಯುವದಕ್ಕಾಗಿಯೇ ಹೊರಟಿರುವೆನು. ನನ್ನ ನಿಜರೂಪದಿಂದ ಹೋದರೆ ಏನಾದರೂ ವಿಘ್ನವು ಸಂಭವಿಸುವದೆಂದು ತಿಳಿದು ಬ್ರಾಹ್ಮಣ ವೇಷದಿಂದ ಹೊರಟಿರುವೆನು. ಆಗಲಿ, ನಿನ್ನ ಮಂತ್ರವಿದ್ಯೆಯನ್ನು ನನಗೆ ಪ್ರತ್ಯಕ್ಷ ಮಾಡಿ ತೋರಿಸು" ಎನಲು, ಕಶ್ಯಪನು ಅವನಿಗೆ ತನ್ನ ಮಂತ್ರಬಲವನ್ನು ತೋರಿಸಬೇಕೆಂದು ನಿಶ್ಚಯಿಸಿ ಅಲ್ಲಿಯೇ ಒಂದು ಕೆರೆಯ ದಂಡೆಯ ಮೇಲೆ ಬೆಳೆದಿರುವ

ವಟವೃಕ್ಷವನ್ನು ಹತ್ತಿ ಒಬ್ಬ ಬ್ರಾಹ್ಮಣನು ಪತ್ರಾವಳಿಗಾಗಿ ಎಲೆಗಳನ್ನು ಹರಿಯುತ್ತಿರುವ ದನ್ನು ಕಂಡು—"ತಕ್ಷಕನೇ ನೋಡು; ಇದೀಗ ವಟವೃಕ್ಷವು ಇದರ ಮೇಲೆ ಒಬ್ಬ ಬ್ರಾಹ್ಮಣನು ಹತ್ತಿ ಎಲೆಗಳನ್ನು ಹರಿಯುತ್ತಿರುವನು. ನಿನ್ನಲ್ಲಿರುವ ಸರ್ವ ಸಾಮರ್ಥ್ಯ ವನ್ನು ಒಟ್ಟುಗೂಡಿಸಿ, ಈ ವೃಕ್ಷವನ್ನು ದಂಶ ಮಾಡು; ಆ ಮೇಲೆ ನನ್ನ ಮಂತ್ರ ಸಾಮ ರ್ಥ್ಯವನ್ನು ತೋರಿಸುವೆ" ನೆಂದು ಹೇಳಲು, ಕೂಡಲೆ ತಕ್ಷಕನು ಬ್ರಾಹ್ಮಣ ವೇಷವನ್ನು ಬಿಟ್ಟು ತನ್ನ ನಿಜರೂಪವನ್ನು ಧಾರಣ ಮಾಡಿ ಕ್ರೋಧಾಗ್ನಿಯಿಂದ ಪ್ರಜ್ವಲಿಸುತ್ತಿರುವ ನೇತ್ರಗಳುಳ್ಳವನಾಗಿ ದುಧುಃಕಾರವನ್ನು ಮಾಡುತ್ತ ಆ ವಟವೃಕ್ಷವನ್ನು ತನ್ನ ವಿಷಪೂರಿತ ವಾದ ದಂತಗಳಿಂದ ಕಡಕಡನೇ ಕಡೆಯಲು, ಆಗಲೇ ತಕ್ಷಕನ ವಿಷಾಗ್ನಿಯಿಂದ ಆ ಗಿಡವೂ, ಗಿಡದ ಮೇಲೆ ಎಲೆಗಳನ್ನು ಹರಿಯುತ್ತಿರುವ ಬ್ರಾಹ್ಮಣನೂ ಸುಟ್ಟು ಬೂದಿ ಯಾದರು. ಆಗ ತಕ್ಷಕನು—"ಬ್ರಾಹ್ಮಣನೇ, ಈಗ ನಿನ್ನ ಮಂತ್ರ ಸಾಮರ್ಥ್ಯವನ್ನು ತೋರಿಸು, ನೋಡೋಣ?" ಎಂದು ಗರ್ಜಿಸಲು, ಕಶ್ಯಪನು ಅದಕ್ಕೆ ಏನೂ ಉತ್ತರವನ್ನು ಕೊಡದೆ ಆ ಕ್ಷಣದಲ್ಲಿಯೇ ಅವನು ಕೆರೆಯಲ್ಲಿರುವ ನೀರನ್ನು ಕೈಯ್ಯಲ್ಲಿ ತಕ್ಕೊಂಡು ಮಂತ್ರ ವನ್ನುಚ್ಚರಿಸಿ ಆ ಬೂದಿಯ ಮೇಲೆ ಸಿಂಪಡಿಸಲು, ಆ ಬ್ರಾಹ್ಮಣನ ಅಗಾಧವಾದ ಮಂತ್ರ ಸಾಮರ್ಥ್ಯವೆಷ್ಟೋ? ಮೊದಲಿನಂತೆ ಚಿಗಿತಿರುವ ಎಲೆಗಳಿಂದ ಯುಕ್ತವಾದ ವಟವೃಕ್ಷವೂ, ಗಿಡದ ಮೇಲೆ ಹತ್ತಿ ಎಲೆಗಳನ್ನು ಹರಿಯುತ್ತಿರುವ ಬ್ರಾಹ್ಮಣನೂ ಮೊದಲಿನಂತೆಯೇ ತೋರಹತ್ತಿದರು. ಆಗ ತಕ್ಷಕನು ಆಶ್ಚರ್ಯದಿಂದ ತನ್ನ ತಲೆಯನ್ನಲ್ಲಾಡಿಸಿ—"ಅಹು ದಹುದು! ಬ್ರಾಹ್ಮಣನೇ, ನಿನ್ನ ಮಂತ್ರಬಲವು ಅಗಾಧವಾದದ್ದೇ ಸರಿ. ಈ ನಿನ್ನ ಮಂತ್ರ ವನ್ನು ಕಲಿಸಿದ ಗುರುಗಳು ಈ ಜಗತ್ತಿನಲ್ಲಿ ಧನ್ಯರು" ಎಂದು ಅವನನ್ನು ಹೊಗಳಿ— "ಒಳ್ಳೇದು, ಬ್ರಾಹ್ಮಣನೇ ನಿನಗೊಂದು ಮಾತು ಹೇಳುತ್ತೇನೆ ಕೇಳುವೆಯಾ? ಒಂದು ವೇಳೆ ರಾಜನಿಗೆ ನಾನು ಕಡಿದ ವಿಷವನ್ನು ಇಳಿಸಿದರೆ ಶ್ರೀಂಗಿಋಷಿಗಳ ಶಾಪವನ್ನು ನೀನು ಅಸತ್ಯ ಮಾಡುವದಲ್ಲದೆ ಈ ಲೋಕದಲ್ಲಿ ನನ್ನ ಪ್ರತಾಪವನ್ನು ಕಡಿಮೆ ಮಾಡಿದಂತಾಗುವ ದಿಲ್ಲವೇ? ಆದ ಕಾರಣ ಇಲ್ಲಿಂದಲೇ ನೀನು ತಿರಿಗಿ ಹೋಗು" ಎಂದು ಹೇಳಲು ಅದಕ್ಕೆ ಕಶ್ಯಪನು—"ಎಲಾ ತಕ್ಷಕಾ, ನೀನು ಒಳ್ಳೇ ಉಪದೇಶವನ್ನು ಹೇಳುತ್ತೀ? ಮಹಾ ರಾಜನ ಜೀವವನ್ನು ರಕ್ಷಿಸಿದರೆ ದರಿದ್ರನಾದ ನನಗೆ ಅಪರಿಮಿತ ದ್ರವ್ಯವು ಸಿಗುವದಲ್ಲದೆ, ಜಗತ್ತಿನಲ್ಲಿ ನನ್ನ ಕೀರ್ತಿಯು ವಿಸ್ತಾರವಾಗುವದು. ಶ್ರೀಂಗಿಋಷಿಗಳ ಶಾಪವು ಸುಳ್ಳಾದ ರೇನು? ನಿನ್ನ ಪ್ರತಾಪವು ಕಡಿಮೆಯಾದರೇನು? ಅದರ ಚಿಂತೆಯು ನನಗೇಕೆ ಬೇಕು? ಮುಖ್ಯವಾಗಿ ನನಗೆ ದ್ರವ್ಯವು ದೊರೆತರೆ ಸಾಕು" ಎಂದು ಹೇಳಲು, ತಕ್ಷಕನು—"ಬಡ ಬ್ರಾಹ್ಮಣನೇ, ನಿನಗೆ ದ್ರವ್ಯವು ಬೇಕಾಗಿರುವದಷ್ಟೇ; ಆದರೆ ಮಹಾರಾಜನು ನಿನಗೆ ಎಷ್ಟು ಹಣವನ್ನು ಕೊಡುವನೋ? ಅದರ ನೂರು ಪಾಲು ಸಂಪತ್ತನ್ನು ಕೊಡುವೆನು; ಇನ್ನಾದರೆ ನನ್ನ ಕಾರ್ಯಕ್ಕೆ ನೀನು ವಿಘ್ನವನ್ನು ಮಾಡದೆ ತಿರಿಗಿ ಹೋಗುವೆಯಾ?" ಎಂದು

ಹೇಳಲು, ಆ ಮಾತಿಗೆ ಕಶ್ಯಪನು ಒಪ್ಪಿಕೊಂಡನು. ಆಗ ತಕ್ಷಕನು ಭೂಗರ್ಭದಲ್ಲಿರುವ ಅಪಾರ ದ್ರವ್ಯವನ್ನು ತೆಗೆಸಿ ತನ್ನ ಸೇವಕರ ಮೇಲೆ ಹೊರಿಸಿ ಆ ಬ್ರಾಹ್ಮಣನಿಗೆ ಕೊಟ್ಟು ಕಳಿಸಿದನು.

ಈ ಪ್ರಕಾರ ಕಶ್ಯಪನಿಗೆ ಲಂಚವನ್ನು ಕೊಟ್ಟು ಅವನನ್ನು ತಿರಿಗಿ ಕಳಿಸಿದ ಮೇಲೆ ತಕ್ಷಕನು ಗುಪ್ತರೂಪದಿಂದ ಹಸ್ತಿನಾಪುರಕ್ಕೆ ಬಂದು ಮುಟ್ಟಿ ಅಲ್ಲಿ ಗುಪ್ತವಾಗಿಯೇ ಇರುತ್ತಿದ್ದನು. ಇತ್ತ ಪರೀಕ್ಷಿತನು ಶುಕಾಚಾರ್ಯರು ಹೇಳುತ್ತಿರುವ ಭಾಗವತ ಪುರಾಣ ವನ್ನು ಭಕ್ತಿಯಿಂದ ಕೇಳುತ್ತಿರಲು, ಬ್ರಾಹ್ಮಣರು ಮಹಾರಾಜನಿಗೆ ಬರುವ ಅರಿಷ್ಟ ಪರಿ ಹಾರಾರ್ಥವಾಗಿ ನಿತ್ಯದಲ್ಲಿಯೂ ಜಪತಪಾನುಷ್ಠಾನಗಳನ್ನು ನಡೆಸುತ್ತಿದ್ದರು. ಅದನ್ನು ಗುಪ್ತರೂಪದಿಂದಿರುವ ತಕ್ಷಕನು ನೋಡಿ ತನ್ನ ಮನಸ್ಸಿನಲ್ಲಿ—"ಬ್ರಾಹ್ಮಣರೇ, ಋಷಿಶಾಪವು ನಿಮ್ಮಂಥವರ ಜಪತಪಗಳಿಂದೇನಾದರೂ ತಪ್ಪುವದುಂಟೇ?" ಎಂದು ಹಾಸ್ಯ ಮಾಡುತ್ತಿದ್ದನು. ಮಹಾರಾಜನ ಮರಣಸೂಚಕವಾದ ಏಳನೆಯ ದಿವಸವು ಪ್ರಾಪ್ತವಾಯಿತು. ಅವತ್ತಿನ ದಿವಸ ತಕ್ಷಕನು ತನ್ನ ಮನಸ್ಸಿನಲ್ಲಿ ಒಂದು ಯುಕ್ತಿಯನ್ನು ಹುಡುಕಿ, ತನ್ನ ಕೂಡ ಕರೆದುಕೊಂಡು ಬಂದಿರುವ ಅನೇಕ ಸರ್ಪಸಮುದಾಯಗಳಿಗೆ ಹೇಳಿದ್ದೇನಂದರೆ—"ಈಗ ಸಂಧ್ಯಾಸಮಯವು ಪ್ರಾಪ್ತವಾಗುತ್ತ ಬಂದಿತು. ನೀವೆಲ್ಲರೂ ಶುಚಿರ್ಭೂತರಾದ ಬ್ರಾಹ್ಮಣರ ವೇಷವನ್ನು ಧಾರಣ ಮಾಡಿ ಮಹಾರಾಜನಿಗೆ ಕೊಡುವ ದಕ್ಕಾಗಿ ಫಲಪುಷ್ಪಗಳನ್ನು ತೆಗೆದುಕೊಂಡು ಭಾಗವತ ಪುರಾಣವು ನಡೆದ ಲೋಹಮಂದಿರಕ್ಕೆ ಹೋಗಿರಿ; ಯಾರಾದರೂ ನಿಮಗೆ ಪ್ರತಿಬಂಧಕವನ್ನು ಮಾಡಿದರೆ—"ನಾವು ತಪೋವನದಿಂದ ಬಂದ ಬ್ರಾಹ್ಮಣರು. ಮಹಾರಾಜನಿಗೆ ಇವತ್ತಿನ ದಿವಸ ತಕ್ಷಕನಿಂದ ಬರುವ ಸಂಕಟವು ಪರಿಹಾರವಾದದ್ದರಿಂದ ಇಂತಿಹ ಸಂತೋಷ ಸಮಯದಲ್ಲಿ ನಾವು ಅವನಿಗೆ ಆಶೀರ್ವಾದವನ್ನು ಮಾಡಿ ಫಲಮಂತ್ರಾಕ್ಷತೆಗಳನ್ನು ಕೊಟ್ಟು ಹೋಗುವೆವು" ಎಂದು ಹೇಳಿರಿ; ಅಂದರೆ ರಾಜನಿದ್ದಲ್ಲಿಗೆ ಹೋಗುವದಕ್ಕೆ ನಿಮ್ಮನ್ನು ಯಾರೂ ತಡೆಯುವ ದಿಲ್ಲ. ಬ್ರಾಹ್ಮಣರ ಮೇಲೆ ಅವನ ಭಕ್ತಿಯು ಬಹಳ. ಆ ಮೇಲೆ ನೀವು ಅಲ್ಲಿಗೆ ಹೋಗಿ ರಾಜನಿಗೆ ಆಶೀರ್ವಾದವನ್ನು ಮಾಡಿ, ಅವನಿಗೆ ಫಲಗಳನ್ನು ಕೊಟ್ಟು ಭಕ್ಷಣ ಮಾಡೆಂದು ಹೇಳಿರಿ. ಆಗ ನಾನು ನನ್ನ ಕಾರ್ಯವನ್ನು ಸಾಧಿಸಿಕೊಳ್ಳುವೆನು" ಎಂದು ಹೇಳಿ ಕಳುಹಿಸಿ, ತಕ್ಷಕನು ಬಾಲಹುಳದ ರೂಪವನ್ನು ಧಾರಣ ಮಾಡಿ ಒಂದು ಬೋರೇ ಹಣ್ಣಿನಲ್ಲಿ ಅಡಿಗಿಕೊಂಡು ಅರಸನ ಪ್ರಾಣವನ್ನು ತೆಗೆದುಕೊಳ್ಳಬೇಕೆಂದು ನಡೆದನು.

ಇತ್ತ ತಕ್ಷಕನ ಆಜ್ಞೆಯಂತೆ ಅನೇಕ ಸರ್ಪಗಳು ಉತ್ತಮೋತ್ತಮರಾದ ಬ್ರಾಹ್ಮಣ ರಂತೆ ವೇಷವನ್ನು ಧಾರಣ ಮಾಡಿ ಸುಪಕ್ವವಾದ ಅನೇಕ ಫಲಗಳಿಂದ ತುಂಬಿದ ಪಾತ್ರೆ ಗಳನ್ನು ಕೈಯ್ಯಲ್ಲಿ ತೆಗೆದುಕೊಂಡು ವೇದಘೋಷವನ್ನು ಮಾಡುತ್ತ ನಿರ್ಭಯದಿಂದ ಪುರಾಣವು ನಡೆದಿರುವಲ್ಲಿಗೆ ಹೊರಟರು. ಮಾರ್ಗಹಿಡಿದು ಹೋಗುತ್ತಿರುವಾಗ ಕಪಟ

ವೇಷಧಾರಿಗಳಾದ ಬ್ರಾಹ್ಮಣರ ತೇಜಸ್ಸನ್ನೂ ಅವರು ಮಾಡುತ್ತಿರುವ ವೇದಘೋಷವನ್ನೂ ನೋಡಿ ಜನರು ಆಶ್ಚರ್ಯಚಕಿತರಾದರು. ಆಗಲವರು ಲೋಹಸ್ತಂಭಕ್ಕೆ ಹೋಗಿ ಮುಟ್ಟಿ, ಮಂತ್ರಿಗೆ ಹೇಳಿದ್ದೇನಂದರೆ –“ ತಕ್ಷಕನಿಂದ ಮಹಾರಾಜನಿಗೆ ಬರುವ ಸಂಕಟವು ಪರಿಹಾರವಾಯಿತೆಂಬ ಸಂತೋಷದಿಂದ ಅವನನ್ನು ಕಂಡು ಅವನಿಗೆ ಫಲಾಶೀರ್ವಾದವನ್ನು ಮಾಡುವದಕ್ಕಾಗಿ ನಾವು ತಪೋವನದಿಂದ ಬಂದಿರುವೆವು” ಎಂದು ಹೇಳಲಾಗಿ ಮಂತ್ರಿಯು ಮಹಾರಾಜನಲ್ಲಿಗೆ ಹೋಗಿ ಈ ವೃತ್ತಾಂತವನ್ನು ತಿಳಿಸಲು, ರಾಜನು ಸಂತೋಷಪಟ್ಟು –“ ಮಂತ್ರಿಯೇ, ತಪೋವನದಿಂದ ಭಕ್ತಿ ಪೂರ್ವಕವಾಗಿ ನನಗೆ ಆಶೀರ್ವಾದವನ್ನು ಮಾಡುವದಕ್ಕೆ ಬ್ರಾಹ್ಮಣರು ನನ್ನಲ್ಲಿಗೆ ಬಂದಿರಲು, ಅವರನ್ನು ತಡೆಯುವದುಂಟೇ? ಬ್ರಾಹ್ಮಣರೇ ನನ್ನ ಜೀವನ ಸರ್ವಸ್ವವು” ಎಂದು ಅವರ ಕಾಪಟ್ಯವನ್ನು ತಿಳಿಯದೆ ಮಾತಾಡಲು. ರಾಜಾಜ್ಞೆಯಂತೆ ಮಂತ್ರಿಯು ಆ ಕಪಟ ವೇಷಧಾರಿಗಳಾದ ಬ್ರಾಹ್ಮಣರಿಗೆ ಹೋಗುವದಕ್ಕೆ ಅಪ್ಪಣೆಯನ್ನು ಕೊಟ್ಟನು. ಕೂಡಲೆ ಅವರು ನಿರ್ಭಯದಿಂದ ರಾಜನಿದ್ದಲ್ಲಿ ಬಂದು ವೇದಮಂತ್ರಗಳಿಂದ ಅವನಿಗೆ ಆಶೀರ್ವಾದವನ್ನು ಮಾಡಿ, ತಾವು ತಂದಿರುವ ಸುಪಕ್ವವಾದ ಅನೇಕ ಫಲಗಳನ್ನು ಮುಂದೆ ಇಟ್ಟು—“ ರಾಜಾಧಿರಾಜನೇ, ನಿನಗೆ ಆ ತಕ್ಷಕನಿಂದ ಬರುವ ಸಂಕಟವು ಪರಿಹಾರವಾಯಿತೆಂಬ ಸಂತೋಷದಿಂದ ನಿನ್ನ ಸಲುವಾಗಿ ಆಶೀರ್ವಾದಪೂರ್ವಕವಾಗಿ ನಾವು ತಂದು ಕೊಟ್ಟಿರುವ ಫಲಗಳನ್ನು ಸ್ವೀಕಾರ ಮಾಡಬಹುದು” ಎಂದು ಹೇಳಲು, ರಾಜನು ಸಂತೋಷಪಟ್ಟು ಬ್ರಹ್ಮತೇಜಸ್ಸಿನಿಂದ ಶೋಭಿಸುತ್ತಿರುವ ಆ ಕಪಟ ವೇಷಧಾರಿಗಳಾದ ಬ್ರಾಹ್ಮಣರಿಗೆ ಆಸನಗಳನ್ನು ಕೊಟ್ಟು ಕೂಡ್ರಿಸಿದನು. ಅಷ್ಟರೊಳಗಾಗಿ ಭಾಗವತ ಪುರಾಣವು ಮುಗಿಯಲು, ರಾಜನು ಶುಕಾಚಾರ್ಯರಿಗೆ ವಿಧಿಪೂರ್ವಕವಾಗಿ ಷೋಡಶೋಪಚಾರಗಳಿಂದ ಪೂಜಿಸಿ ಅವರಿಗೆ ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು.

ಇತ್ತ ಹಿಂದೆ ಹೇಳಿದ ಬ್ರಾಹ್ಮಣರು ತಂದಿದ್ದ ಸುವಾಸಿಕವಾದ ಪಕ್ವಫಲಗಳನ್ನು ನೋಡಿ, ಮಹಾರಾಜನು ಸಂತೋಷಪಟ್ಟು ಆ ಫಲಗಳನ್ನು ತನ್ನ ಕೈಯ್ಯಲ್ಲಿ ತಕ್ಕೊಂಡು, ಅಲ್ಲಿ ಕುಳಿತ ಎಲ್ಲ ಬ್ರಾಹ್ಮಣರಿಗೂ ಒಂದೊಂದು ಶುದ್ಧವಾದ ಫಲಪ್ರಸಾದವನ್ನು ಕೊಟ್ಟು, ದುರ್ದೈವದಿಂದ ಯಾವ ಬಾಲಹುಳದ ರೂಪದಿಂದ ತಕ್ಷಕನು ಅಡಗಿಕೊಂಡಿದ್ದನೋ ಅದೇ ಫಲವನ್ನು ಅರಸನು ತನ್ನ ಕೈಯ್ಯಲ್ಲಿ ತೆಗೆದುಕೊಂಡನು. ಆ ಮೇಲೆ ಬ್ರಾಹ್ಮಣರು “ಮಹಾರಾಜನೇ ಫಲಗಳನ್ನು ಸ್ವೀಕಾರ ಮಾಡು” ಎಂದು ವಿನಯದಿಂದ ಹೇಳುತ್ತಿರಲು, ರಾಜನು ಆ ಫಲವನ್ನು ಬಿಚ್ಚಿ ನೋಡುತ್ತಿರುವಷ್ಟರಲ್ಲಿ ಅದರೊಳಗೆ ರಕ್ತವರ್ಣದ ಒಂದು ಬಾಲಹುಳವನ್ನು ಕಂಡು ಗಾಬರಿಯಾಗಿ –“ ಇದು ತಕ್ಷಕನ ಸೂಕ್ಷ್ಮ ರೂಪವೋ ಏನೋ? ” ಎಂದು ಅವನಿಗೆ ಸಂಶಯವು ಬರುತ್ತಿರಲು ಅರಸನು ಆ ಹುಳವನ್ನು ಎಲ್ಲರಿಗೂ ತೋರಿಸಿ—“ ಇದು ಹಣ್ಣೊಳಗಿರುವ ಸಹಜವಾದ ಹುಳವೋ? ಅಥವಾ ಮತ್ತೇನಾದರೂ ಇರಬಹುದೋ? ” ಎಂದು

ಕೇಳಲು. ಅದಕ್ಕೆ ಬ್ರಾಹ್ಮಣರು ನಸುನಗುತ್ತ "ರಾಜನ್, ಇದು ಸಹಜವಾದ ಕ್ರಿಮಿಯೇ ಇರುತ್ತದಲ್ಲದೆ ಎರಡನೆಯದೇನೂ ಅಲ್ಲ" ಎಂದು ಹೇಳಲು, ರಾಜನು ಸಮಾಧಾನವನ್ನು ಹೊಂದಿ—"ಹಾಗಾದರೆ ನಿಮ್ಮೆಲ್ಲರ ಆಶೀರ್ವಾದದಿಂದ ನನಗೆ ಬಂದ ಮರಣವು ದೂರಾಯಿತು" ಎಂದು ಸಂತೋಷದಿಂದ ಆ ಹುಳವನ್ನು ತೆಗೆದು ಹಾಕಲು ಅದು ಅರಸನ ಕೊರಳಿಗೆ ಅಂಟಿಕೊಂಡಿತು. ಆಗ ತಕ್ಷಕನು ತನ್ನ ವಿಶಾಲವಾದ ರೂಪವನ್ನು ಧಾರಣ ಮಾಡಿ ತನ್ನ ರಕ್ತವರ್ಣದ ಹೆಡೆಯನ್ನು ನೆಲಕ್ಕಪ್ಪಳಿಸಿ ಧುಧುಃಕಾರವನ್ನು ಮಾಡಿ, ಭಯಂಕರವಾದ ನಾಲಿಗೆಯನು, ತೆರೆಯುತ್ತ ಪರೀಕ್ಷಿತನನ್ನು ತನ್ನ ವಿಷದಂತಗಳಿಂದ ಕಡಕಡನೇ ಕಡಿಯುತ್ತಿರುವಾಗ ಅದರ ಮುಖದಿಂದ ಹೊರಟ ಕೋಪಾಗ್ನಿ ಜ್ವಾಲೆಯು ಆಕಾಶದ ತನಕ ಹೋಯಿತು. ಅಹಾ! ಆ ತಕ್ಷಕನ ಕೋಪವಾದರೂ ಎಷ್ಟು? ಇಷ್ಟಾದರೂ ಆ ರಾಜನನ್ನು ಬಿಡದೆ ಅವನ ಕೊರಳಿಗೆ ಸುತ್ತು ಹಾಕಿ ತನಗೆ ಸಾಕಾಗುವ ತನಕ ಕಡಿಯಿತು. ಇಂತಿಹ ಭಯಂಕರ ನೋಟವನ್ನು ನೋಡಲಾರದೆ, ರಾಜದೂತರು ಮೊದಲಾದವರು ದಿಕ್ಕುದಿಕ್ಕಿಗೆ ಓಡಿ ಹೋಗಿ ತಮ್ಮ ಜೀವವನ್ನು ಉಳಿಸಿಕೊಂಡರು. ಆಗಲೇ ತಕ್ಷಕನ ವಿಷಜ್ವಾಲೆಯಿಂದ ಲೋಹಸ್ತಂಭ ಸಹಿತವಾಗಿ ರಾಜನು ಸುಟ್ಟು ಬೂದಿಯಾದನು. ಹಸ್ತಿನಾಪುರದಲ್ಲಿ ಎಲ್ಲಿ ನೋಡಿದರೂ ಹಾಹಾಕಾರವೇ ಎದ್ದಿತು. ಇಂತಿಹ ಪ್ರಳಯವನು ನೋಡಿ ಪ್ರಜೆಗಳು ರಾಜಧಾನಿಯನ್ನು ಬಿಟ್ಟು ಓಡಿ ಹೋದರು.

ವಾರಣಾಶಿಯಿಂದ ಕಶ್ಯಪನೆಂಬ ಬ್ರಾಹ್ಮಣ ಮಾಂತ್ರಿಕನು ಹಸ್ತಿನಾಪುರಕ್ಕೆ ಬರುವಾಗ ಒಂದು ಕೆರೆಯ ದಂಡೆಯ ಮೇಲೆ ಬೆಳೆದಿರುವ ವಟವೃಕ್ಷವನ್ನು ಹತ್ತಿ ಒಬ್ಬ ಬ್ರಾಹ್ಮಣನು ಎಲೆಗಳನ್ನು ಹರಿಯುತ್ತಿರುವ ಕಾಲದಲ್ಲಿ ಕಶ್ಯಪ ತಕ್ಷಕರು ಆ ಸ್ಥಳದಲ್ಲಿ ಒಬ್ಬರಿಗೊಬ್ಬರು ಭೆಟ್ಟಿಯಾಗಿ, ವಾದವಿವಾದವು ನಡೆದು ತಕ್ಷಕನು ಆ ವಟವೃಕ್ಷವನ್ನು ಕಡಿಯಲು, ಬ್ರಾಹ್ಮಣ ಸಹಿತವಾಗಿ ಆ ಗಿಡವು ಸುಟ್ಟು ಬೂದಿಯಾಯಿತೆಂತಲೂ, ಪುನಃ ಕಶ್ಯಪನು ತನ್ನ ಮಂತ್ರಸಾಮರ್ಥ್ಯದಿಂದ ಆ ವೃಕ್ಷವನ್ನೂ ಬ್ರಾಹ್ಮಣನನ್ನೂ ಮೊದಲಿದ್ದಂತೆ ಮಾಡಿದನೆಂತಲೂ ಹಿಂದೆ ಹೇಳಿದ್ದೇವಷ್ಟೇ? ಅದೇ ಕಶ್ಯಪನಿಂದ ಬದುಕಿದ ಬ್ರಾಹ್ಮಣನು ಹಸ್ತಿನಾಪುರಕ್ಕೆ ಬಂದು ಅಲ್ಲಿ ಏನು ಸಂಗತಿಯು ನಡೆಯುತ್ತದೆಂದು ಮೋಜು ನೋಡುತ್ತ ಇರುತ್ತಿದ್ದನು. ಪರೀಕ್ಷಿತನು ಮೃತನಾದ ಮೇಲೆ ತಾನು ತಕ್ಷಕನ ವಿಷಸಂಪರ್ಕದಿಂದ ಮೃತನಾದದ್ದನ್ನೂ ಪುನಃ ಕಶ್ಯಪ ಬ್ರಾಹ್ಮಣನು ತನ್ನನ್ನು ಮಂತ್ರಬಲದಿಂದ ಬದುಕಿಸಿದ್ದನ್ನೂ ಜನರ ಮುಂದೆ ಬಣ್ಣಿಸಿ ಹೇಳಹತ್ತಿದನು. ಆಗ ಜನರೆಲ್ಲರು ಅವನಿಗೆ ಛೀ! ಥೂ! ಹಾಕಿ, "ಹುಚ್ಚಾ ಹಾರುವನೇ ಮೊದಲೇ ನೀನು ಈ ಸಂಗತಿಯನ್ನು ಹೇಳಿದ್ದರೆ ವಾರಣಾಶಿಯಿಂದ ಪುನಃ ಕಶ್ಯಪನನ್ನು ಕರೆಸಿ ನಮ್ಮ ಮಹಾರಾಜನನ್ನು ಬದುಕಿಸಿಕೊಳ್ಳುತ್ತಿದ್ದೆವಲ್ಲ? ನಿನ್ನ ಹುಚ್ಚುತನಕ್ಕೆ ಬೆಂಕೀ ಹಚ್ಚಲಿ. ನಿನ್ನ ಹುಚ್ಚುತನದಿಂದಲೇ ನಮ್ಮ ರಾಜನು ಮರಣ ಹೊಂದಿದನು" ಎಂದು ಆ ಬ್ರಾಹ್ಮಣನನ್ನು ಜರೆದು ನಿಂದಿಸಹತ್ತಿದರು.

ವಾಚಕರೇ, ಜಗತ್ತಿನಲ್ಲಿ ಇಂತಿಹ ತಿಳುವಳಿಕೆ ಇಲ್ಲದವರು ಅನೇಕರಿರುವರು. ಆ ಬ್ರಾಹ್ಮಣನು ಮೊದಲೇ ಈ ಸಂಗತಿಯನ್ನು ಹೇಳಿದ್ದರೆ ಪರೀಕ್ಷಿತ ಮಹಾರಾಜನು ಒಡಕು ತ್ತಿದ್ದನೆಂಬ ವಿಚಾರವು ಅವನ ತಲೆಯಲ್ಲಿ ಬರಲಿಲ್ಲ. ಪಾಪ! ಜನರು ಬೈದರೆ ಅವನು ಏನು ಮಾಡ್ಯಾನು. ಒಟ್ಟಿಗೆ ದೈವಸಂಕಲ್ಪವು ಹೇಗಿರುವದೋ? ಹಾಗೆ ಆಗುವದು.

---

## ೪ನೆಯ ಅಧ್ಯಾಯ.

# ಭವಿಷ್ಯಕಥನ.



ವಾಚಕ ಮಹಾಶಯರೇ, ಇಷ್ಟು ಹೊತ್ತಿನ ವರೆಗೆ ಪರೀಕ್ಷಿತರಾಜನಿಗೆ ಶ್ರೀಂಗಿ ಋಷಿಯಿಂದ ಶಾಪ ಬಂದ ಸಂಗತಿಯನ್ನೂ ಮತ್ತು ಅವನು ತಕ್ಷಕನಿಂದ ಮೃತನಾದ ಸಂಗತಿಯನ್ನೂ ಜನಮೇಜಯರಾಜನಿಗೆ ಅವನ ಮಂತ್ರಿಯು ಹೇಳಿದನೆಂದು ನಿಮಗೆ ಹೇಳಿದೆವು. ಇನ್ನು ಮುಂದೆ ಆ ರಾಜನು ಏನು ಮಾಡಿದನೆಂದು ಹೇಳುವದನ್ನು ಅಷ್ಟಕ್ಕೇ ಬಿಟ್ಟು, ಸರ್ಪಗಳಿಗೆ ಅವರ ತಾಯಿಯಾದ ಕದ್ರುದೇವಿಯು ಶಾಪ ಕೊಟ್ಟ ಸಂಗತಿಯು ಮುಂದಿನ ಕಥೆಗೆ ಸಂಬಂಧವಿರುವದರಿಂದ ಅದನ್ನು ಮೊದಲು ನಿಮಗೆ ಹೇಳುವೆನು.

"ಕದ್ರುದೇವಿ" ಮತ್ತು "ವಿನತಾದೇವಿ" ಎಂಬ ಇಬ್ಬರು ಸ್ತ್ರೀಯರು ಕಶ್ಯಪ ಋಷಿಯ ಪತ್ನಿಯರು. ಕದ್ರುದೇವಿಯು ಸರ್ಪಗಳ ತಾಯಿಯು, ವಿನತಾದೇವಿಯು ಗರುಡನ ತಾಯಿಯು. ಒಂದು ದಿವಸ ಈ ಕದ್ರು-ವಿನತೆಯರು ಸಂಚಾರ ಮಾಡುತ್ತಿರುವಾಗ ಸೂರ್ಯನ ರಥದ ಕುದುರೆಯಾದ "ಉಚ್ಚೈಃಶ್ರವ" ವನ್ನು ನೋಡಿ ಉಭಯತರು ಮಾಡಿದ ಸಂವಾದವನ್ನು ಕೆಳಗೆ ಬರೆದಿರುತ್ತೇವೆ.

ಕದ್ರು:- ವಿನತೇ, ಈ ಸೂರ್ಯನ ಕುದುರೆಯು ಯಾವ ಬಣ್ಣದ್ದು ಅದೆ?

ವಿನತೆ:—ಶ್ವೇತವರ್ಣದ್ದು.

ಕದ್ರು:—ವಿನತೇ, ನೀನು ಹೇಳಿದಂತೆ ಈ ಕುದುರೆಯು ಶ್ವೇತವರ್ಣದ್ದು ಇದ್ದರೂ ಅದರ ಬಾಲವು ಮಾತ್ರ ಕಪ್ಪಾಗಿದೆ.

ವಿನತೆ: ಕದ್ರು, ನನ್ನ ನೇತ್ರಗಳು ಮಂದವಾಗಿರುವಂತೆ ತೋರುತ್ತದೆ. ಅಲ್ಲೇ? ಕುದುರೆಯು ಬೆಳ್ಳಗಿದ್ದು, ಬಾಲವು ಎಲ್ಲಿಯಾದರೂ ಕಪ್ಪು ಇರುವದುಂಟೇ?

ಕದ್ರು:—ಹೌದು, ವಿನತೆ ಬಾಲವು ನಿಶ್ಚಯವಾಗಿ ಕಪ್ಪಾಗಿರುವದು.

ಹೀಗೆ ಕದ್ರುದೇವಿಯು ಹಟವನ್ನೇ ಹಿಡಿದಳು. ಆಗ ಉಭಯತರು ವಾದವಿವಾದ ವನ್ನು ಮಾಡಿ, ಕಡೆಗೆ ನಾವಿಬ್ಬರೂ ನಾಳೆ ಇಲ್ಲಿಗೆ ಬಂದು ಪರೀಕ್ಷಿಸೋಣ. ಅದು ಶ್ವೇತ ಮಯವಾಗಿದ್ದರೆ ನಾನು ಸಹಸ್ರ ವರ್ಷಗಳವರೆಗೆ ನಿನ್ನ ದಾಸ್ಯತ್ವವನ್ನು ಮಾಡುವೆನೆಂದು ಕದ್ರುದೇವಿಯು ಅಂದಳು. ಬಾಲವು ಮಾತ್ರ ಕಪ್ಪಾಗಿದ್ದರೆ ನಾನು ಸಹಸ್ರ ವರ್ಷಗಳ ವರೆಗೆ ನಿನ್ನ ದಾಸಿಯಾಗುವೆನೆಂದು ವಿನತೆಯು ನುಡಿದಳು. ಹೀಗೆ ಉಭಯತರು ಪಂಥ ವನ್ನು ಮಾಡಿಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಸುಳ್ಳು ಹಟವನ್ನು ಹಿಡಿ ದಿರುವ ಕದ್ರುದೇವಿಯು ರಾತ್ರೀ ವೇಳೆಯಲ್ಲಿ ತನ್ನ ಮಕ್ಕಳಾದ ಎಲ್ಲ ಸರ್ಪಗಳನ್ನು ಕರೆದು —“ಮಕ್ಕಳಿರಾ, ನಿನ್ನಿನ ದಿವಸ ನನಗೂ ವಿನತೆಗೂ ವಾದವಿವಾದವಾಗಿ ಪಂಥ ವನ್ನು ಮಾಡಿರುತ್ತೇನೆ. ಅದೇನೆಂದರೆ—“ಸೂರ್ಯನ ರಥದ ಕುದುರೆಯ ಸರ್ವಾಂಗವು ಬೆಳ್ಳಗಿದ್ದರೂ ಬಾಲವು ಮಾತ್ರ ಕಪ್ಪಾಗಿರುತ್ತದೆಂಬ ಮಾತು ನನ್ನ ಬಾಯಿಯಿಂದ ಬಂದಿತು. ಆಗ ನಾನು ಅದೇ ಹಟವನ್ನು ಹಿಡಿದೆನು. ನಾಳಿನ ದಿವಸ ಅದರ ಬಾಲವು ಕಪ್ಪಾಗಿರುವ ದನ್ನು ನಾನು ತೋರಿಸಿದರೆ ಆ ವಿನತೆಯು ಸಹಸ್ರ ವರ್ಷಗಳವರೆಗೆ ನನ್ನ ದಾಸಿಯಾಗ ಬೇಕೆಂದು ಪಂಥವನ್ನು ಮಾಡಿರುತ್ತೇನೆ. ಆದಕಾರಣ ನೀವೆಲ್ಲರೂ ಈಗಲೇ ಹೋಗಿ ಆ ಕುದುರೆಯ ಬಾಲವನ್ನು ಕಡಿದು ನಿಮ್ಮ ವಿಷದಿಂದ ಅದರ ಬಾಲವು ಶ್ಯಾಮವರ್ಣದ್ದಾ ಗುವಂತೆ ಮಾಡಿರಿ” ಎಂದು ಹೇಳಲು, ಆಗ ಸರ್ಪಗಳು—“ಅವ್ವಾ, ಅಂತಿಹ ದೊಡ್ಡವರ ಕೂಡ ವೈರತ್ವವನ್ನು ಕಟ್ಟಿಕೊಂಡರೆ ನಮ್ಮ ಅವಸ್ಥೆಯು ಏನಾಗಬೇಕು? ನಾವು ಅಂತಿಹ ನೀಚ ಕೃತಿಯನ್ನು ಮಾಡಿದರೆ ಭಾಸ್ಕರನು ನಮ್ಮನ್ನು ಸುಟ್ಟು ಬೂದಿ ಮಾಡಲಿಕ್ಕಿಲ್ಲವೇ? ಆದ ಕಾರಣ ಈ ಕೆಲಸಕ್ಕೆ ನಾವು ಸರ್ವಥಾ ಹೋಗಲಾರೆವು” ಎಂದು ಸ್ಪಷ್ಟವಾಗಿ ಹೇಳಿದವು. ಕದ್ರುದೇವಿಯು ಮೊದಲೇ ದುಷ್ಟ ಸರ್ಪಗಳ ತಾಯಿಯು ಅಂದ ಮೇಲೆ ಕೇಳುವದೇನು? ಆಗಲೇ ಅವಳು ಕೋಪಾಟೋಪವನ್ನು ಸೈರಿಸದೆ—“ನೀಚರೇ, ನನ್ನ ಆಜ್ಞೆಯನ್ನು ಉಲ್ಲಂಘನ ಮಾಡಿದ್ದರಿಂದ ನಿಮ್ಮನ್ನು ನನ್ನ ಸವತಿಯ ಮಗನಾದ ಗರುಡನು ಸಂಹಾರ ಮಾಡಲಿ; ಮತ್ತು ಮುಂದೆ ಜನಮೇಜಯನೆಂಬ ರಾಜನು ಸರ್ಪಯಾಗವನ್ನು ಮಾಡಿ ನಿಮ್ಮನ್ನು ಸುಟ್ಟು ಬಿಡಲಿ” ಎಂದು ಶಾಪವನ್ನು ಕೊಟ್ಟಳು.

ವಾಚಕರೇ, ಸರ್ಪಗಳಿಗೆ ಹೀಗೆ ಮಾತೃಶಾಪ ಬಂದ ಇಷ್ಟೇ ಸಂಗತಿಯನ್ನು ನಿಮಗೆ ಹೇಳಿ ಮುಂದೆ ಜನಮೇಜಯರಾಜನ ಸರ್ಪಯಾಗದಲ್ಲಿ ಸರ್ಪಕುಲವು ಹೇಗೆ ಸಂಹಾರ ವಾಯಿತು ಎಂಬ ಕಥೆಯನ್ನು ನಿಮಗೆ ಹೇಳುವೆವು.

ಹಿಂದೆ ವರ್ಣಿಸಿದ ಪ್ರಕಾರ ಜನಮೇಜಯರಾಜನಿಗೆ ಅವನ ಮಂತ್ರಿಯು ತಕ್ಷಕನಿಂದ ಪರೀಕ್ಷಿತನು ಮೃತನಾದ ಸಂಗತಿಯನ್ನು ಸಾದ್ಯಂತವಾಗಿ ಹೇಳಿ ಆ ಮೇಲೆ- "ಮಹಾ ರಾಜನೇ ನಿಮ್ಮ ತಂದೆಯು ವಿಷ್ಣುಲೋಕಕ್ಕೆ ಹೋದ ನಂತರ ಸಕಲ ಋಷಿಗಳೂ, ಮಂತ್ರಿ, ಸಾಮಂತ, ಪುರೋಹಿತ ಮೊದಲಾದವರೂ ನಿನ್ನನ್ನು ನಿಮ್ಮ ತಂದೆಯ ಸಿಂಹಾಸನದ ಮೇಲೆ ಸ್ಥಾಪಿಸಿ ರಾಜ್ಯಾಭಿಷೇಕವನ್ನು ಮಾಡಿದರು" ಎಂತಲೂ ಹೇಳಿದನು. ಮಂತ್ರಿಯಿಂದ ಈ ಎಲ್ಲ ಸಂಗತಿಯನ್ನು ಕೇಳಿ ಜನಮೇಜಯರಾಜನು—"ತನ್ನ ತಂದೆಯು ತಕ್ಷಕನಿಂದ ಇಂತಿಹ ದುರ್ಮರಣವನ್ನು ಹೊಂದಿದನಲ್ಲವೇ?" ಎಂದು ಮಹದ್ದುಃಖವನ್ನು ಮಾಡಹತ್ತಿದನು. ಅವನ ದುಃಖವನ್ನು ನೋಡಿ ಮಂತ್ರಿ ಮೊದಲಾದ ಎಲ್ಲ ಪ್ರಜೆಗಳು ಶೋಕ ಮಾಡಹತ್ತಿದರು. ಆ ವೇಳೆಯಲ್ಲಿ ಜನಮೇಜಯನು ದುಃಖಾಶ್ರುಗಳನ್ನು ಸುರಿಸುತ್ತ— "ಎಲಾ ದುಷ್ಟನಾದ ತಕ್ಷಕನೇ, ಈ ಪ್ರಕಾರ ಕಪಟತನವನ್ನು ಮಾಡಿ ನನ್ನ ತಂದೆಯ ಪ್ರಾಣವನ್ನು ತೆಗೆದುಕೊಂಡೆಯಾ? ಚಾಂಡಾಲನೇ, ಏಳು ದಿವಸಗಳವರೆಗೆ ನಿನ್ನ ಭಯದಿಂದಲೇ ಅನ್ನ ನೀರು ಸಹ ಇಲ್ಲದೆ ನನ್ನ ಪಿತನು ಉಪವಾಸ ವ್ರತಮಾಡಿ ಕಷ್ಟಪಟ್ಟನಲ್ಲವೇ? ಕಶ್ಯಪನೆಂಬ ಬ್ರಾಹ್ಮಣನಿಗೆ ಲಂಚ ಕೊಟ್ಟು ತಿರಿಗಿ ಕಳುಹಿಸಿ ಕಪಟತನದಿಂದ ನಿನ್ನ ಕಾರ್ಯವನ್ನು ಸಾಧಿಸಿಕೊಂಡೆಯಾ? ಇಷ್ಟೆಲ್ಲ ನೀಚತನವನ್ನು ಮಾಡಿ ನನ್ನ ಪಿತನನ್ನು ಸಂಹಾರ ಮಾಡಲಿಕ್ಕೆ ಅವನು ನಿನಗೆ ಅಂತಿಹ ಅಪರಾಧವನ್ನೇನು ಮಾಡಿದ್ದನು? ಪರಮ ಪಾಪಿಯೇ, ದುಷ್ಟನೇ, ನಿನ್ನ ಜಾತಿ ಸ್ವಭಾವವೇ ಹೀಗಿರುವದಲ್ಲವೇ! ಎಲಾ! ನಿನ್ನಂಥ ದುಷ್ಟನನ್ನು ಭೂಮಿಯ ಮೇಲೆ ಇಡುವದು ಯೋಗ್ಯವಲ್ಲ; ನನ್ನ ತಂದೆಯನ್ನು ಅಪರಾಧವಿಲ್ಲದೆ ಕೊಂದ ಹಾಗೆ ಮತ್ತೆ ಯಾರ ಪ್ರಾಣವನ್ನಾದರೂ ನೀನು ತೆಗೆದುಕೊಳ್ಳತಕ್ಕವನೇ ಸರಿ. ಚಾಂಡಾಲನೇ ನನ್ನ ತಂದೆಯನ್ನು ಕೊಂದ ಸೇಡು ತೀರಿಸಿಕೊಳ್ಳದೆ ಬಿಟ್ಟರೆ ನಾನು ಈ ಜಗತ್ತಿನಲ್ಲಿ ಹುಟ್ಟಿದ್ದಕ್ಕೆ ಸಾರ್ಥಕವೇನು? ಇಷ್ಟು ದಿವಸ ಭೂಮಿಯಲ್ಲಿ ನಿನ್ನನ್ನು ಇಟ್ಟದ್ದೇ ನನ್ನ ತಪ್ಪಾಗಿರುವದು. ಎಲಾ ತಕ್ಷಕಾ, ಇಕೋ ಈಗಲೇ ಶಪಥವನ್ನು ಮಾಡುತ್ತೇನೆ, ನೋಡು—"ನಿನ್ನ ವಂಶ ಸಹಿತವಾಗಿ ನಿನ್ನನ್ನು ಸಂಹರಿಸದಿದ್ದರೆ ನಾನು ಈ ದೇಹತ್ಯಾಗವನ್ನೇ ಮಾಡುವೆನು: ಇದು ನಿಶ್ಚಯವೆಂದು ತಿಳಿ" ಎಂದು ಜನಮೇಜಯರಾಜನು ಶಪಥವನ್ನು ಮಾಡಿ, ಕಣ್ಣುಗಳಲ್ಲಿ ಕಿಡಿಗಳನ್ನುದರಿಸುತ್ತ ರೋಷಾವೇಶದಿಂದ— "ಮಂತ್ರಿಯೇ, ಸರ್ಪಯಾಗವನ್ನು ಮಾಡಿ ಸಮಸ್ತ ಸರ್ಪಗಳನ್ನು ನಾಶ ಮಾಡುವದಲ್ಲದೆ, ಆ ತಕ್ಷಕನನ್ನು ಸುಟ್ಟು ಬೂದಿ ಮಾಡಿ ನನ್ನ ತಂದೆಯನ್ನು ಕೊಂದ ಸೇಡು ತೀರಿಸಿಕೊಳ್ಳುವೆನು. ಈಗಲೇ ಯಜ್ಞಮಂತ್ರಗಳಲ್ಲಿ ಕುಶಲರಾದ ಋಷಿಗಳನ್ನೂ ಬ್ರಾಹ್ಮಣರನ್ನೂ ಕರೆಸು; ಮತ್ತು ಗರುಡ ಮಂತ್ರವಿದ್ಯೆಯಲ್ಲಿ ನಿಪುಣರಾದ ಗಾರುಡಿಗರನ್ನು ಕರೆಸು; ಅಂದರೆ ಅವರು ಒನ್ನೆ ಮಂತ್ರೋಚ್ಚಾರವನ್ನು ಮಾಡಿದರೆ ಕೋಟಿಗಟ್ಟಲೆ ಸರ್ಪಗಳು ಒಮ್ಮೆಲೇ ಸಂಹಾರವಾಗಬೇಕು. ಇದಲ್ಲದೆ ಸರ್ಪಗಳ ವಿಷಯದಲ್ಲಿ ವೈರತ್ವವನ್ನು ಸಾಧಿಸುತ್ತಿರುವ ಉತ್ತಂಕ ಋಷಿಗಳನ್ನೂ "ರುರು" ಎಂಬವರನ್ನು ಕರೆಸು" ಎಂದು ಜನಮೇಜಯರಾಜನು

ತನ್ನ ಪ್ರಧಾನನಿಗೆ ಆಜ್ಞೆಯನ್ನು ಕೊಟ್ಟನು. ರಾಜಾಜ್ಞೆಯಂತೆ ಅವನು ಮಂತ್ರನಿರ್ದೇದಲ್ಲಿ ಪಾರಾಂಗತರಾಗಿಯೂ, ಯಜ್ಞಕಾಲದಲ್ಲಿ ಮಂತ್ರಗಳಿಂದ ಆವಾಹನ ಮಾಡಿದ ಕೂಡಲೆ ದೇವತೆಗಳು ಯಜ್ಞಕುಂಡದ ಹತ್ತಿರ ಮೂರ್ತಿಮಂತಾಗಿ ಬಂದು ನಿಲ್ಲಿಸುವ ಶಕ್ತಿಯುಳ್ಳವರಾಗಿಯೂ ಇರುವ ಗೌಡ, ಮಲ್ಯಾಳ, ಆಂಧ್ರ ದೇಶಗಳಿಂದ ಅನೇಕ ಬ್ರಾಹ್ಮಣರನ್ನು ಕರೆಸಿದನು; ಮತ್ತು ಕೃಷ್ಣವಸ್ತ್ರಗಳನ್ನು ಪರಿಧಾನ ಮಾಡುವ ಕೃಷ್ಣಾಂಬರಗಳನ್ನು ಹೊದ್ದುಕೊಳ್ಳುವವರಾಗಿಯೂ, ಹೋಮಧೂಮದಿಂದ ಸರ್ವದಾ ಆರಕ್ತನೇತ್ರಗಳುಳ್ಳವರಾಗಿಯೂ, ತಮ್ಮ ಕೋಪಾಗ್ನಿಯಿಂದ ಈ ಜಗತ್ತನ್ನೇ ಸುಟ್ಟು ಬಿಡುವರೋ ಏನೋ? ಎಂಬುವಂತೆ ಸರ್ವಕಾಲದಲ್ಲಿ ಕೋಪಾಗ್ನಿಯಿಂದ ತೃಪ್ತರಾಗಿಯೂ ಇರುವ ಅಥರ್ವಣ ವೇದವನ್ನು ಬಲ್ಲಂಥ ಅನೇಕ ಬ್ರಾಹ್ಮಣರನ್ನು ಕರೆಸಿದನು. ಆಗ ಸರ್ಪಯಾಗದ ದೆಸೆಯಿಂದ ಬಂದಿರುವ ಸರ್ವರನ್ನು ಜನಮೇಜಯರಾಜನು ತನ್ನಲ್ಲಿಗೆ ಕರೆಸಿ ಅವರಿಗೆ ಬಹು ಮರ್ಯಾದೆಯನ್ನು ಮಾಡಿ, ಕೈಮುಗಿದು—“ವಿಪ್ರವರ್ಯರೇ. ದುಷ್ಟನಾದ ತಕ್ಷಕನು ಕಾರಣವಿಲ್ಲದೆ ನನ್ನ ತಂದೆಯನ್ನು ಕಡಿದು ಕೊಂದು ಬಿಟ್ಟನು. ಅವನ ಹೆಸರು ನೆಸಪಾದ ಕೂಡಲೆ ನನ್ನ ಮೈ ಉರಿಯುತ್ತದೆ. ಯಾವಾಗ ಆ ದುಷ್ಟನನ್ನು ಸಂಹರಿಸಿ ನನ್ನ ಪಿತನನ್ನು ಕೊಂದ ಸೇಡು ತೀರಿಸಿಕೊಳ್ಳುವೆನೋ? ಎಂಬ ಆತುರವು ನನಗೆ ಉತ್ಪನ್ನವಾಗಿರುವದು. ಆದ ಕಾರಣ ಈಗ ನಾನು ಸರ್ಪಯಾಗವನ್ನು ಮಾಡಿ ತಕ್ಷಕನೊಬ್ಬನನ್ನೇಕೆ? ಸರ್ವ ಸರ್ಪಕುಲವನ್ನೇ ನಾಶ ಮಾಡಬೇಕೆಂದು ನಿಮ್ಮೆಲ್ಲರನ್ನು ಕರೆಸಿರುವೆನು. ನೀವೆಲ್ಲರೂ ನನ್ನ ಇಚ್ಛೆಯನ್ನು ಪೂರ್ಣ ಮಾಡಬೇಕು” ಎಂದು ಬೇಡಿಕೊಳ್ಳಲು, ಅವರು— “ರಾಜನೇ ನಿನ್ನಂಥ ಪಿತೃಭಕ್ತನು ಈ ಜಗತ್ತಿನಲ್ಲಿ ಯಾರೂ ಇಲ್ಲ. ಈಗ ನೀನು ಸರ್ಪಯಜ್ಞವನ್ನು ಮಾಡಿ ಸರ್ಪಕುಲವನ್ನು ಸಂಹಾರ ಮಾಡಿದರೆ ತ್ರಿಭುವನದಲ್ಲಿ ನಿನ್ನ ಕೀರ್ತಿಯು ವಿಸ್ತಾರವಾಗುವದು. ಬೇಗನೆ ಯಜ್ಞಸಾಹಿತ್ಯಗಳನ್ನು ಸಿದ್ಧಪಡಿಸು” ಎಂದು ಹೇಳಲು ಆಗ ರಾಜನು ಯಜ್ಞಕ್ಕೆ ಯೋಗ್ಯವಾದ ಒಂದು ಪ್ರದೇಶವನ್ನು ಶೋಧ ಮಾಡಿ ಅಲ್ಲಿ ಒಂದು ವಿಸ್ತಾರವಾದ ಯಜ್ಞಮಂಟಪವನ್ನು ನಿಲ್ಲಿಸಿ, ಕುಂಡವೇದಿಕೆಗಳನ್ನೂ ಹೋಮಕ್ಕೆ ಬೇಕಾಗುವ ಸರ್ವ ಸಾಮಗ್ರಿಗಳನ್ನೂ ಸಿದ್ಧಪಡಿಸಿ, ಋತ್ವಿಜರನ್ನು ಆಯಾ ಕಾರ್ಯಗಳಲ್ಲಿ ನೇಮಿಸಿ ಯಜ್ಞಕಾರ್ಯವು ಯಥಾಸಾಂಗವಾಗುವಂತೆ ಎಲ್ಲ ಸಿದ್ಧತೆಯನ್ನು ಮಾಡಿಸಿದನು.

ಮೇಲೆ ಹೇಳಿದಂತೆ ಆ ಭವ್ಯವಾದ ಯಾಗಮಂಟಪದಲ್ಲಿ ವೇದೋನಾರಾಯಣರಂತೆ ಶೋಭಿಸುತ್ತ ಚತುರ್ವೇದಗಳಲ್ಲಿ ನಿಪುಣರಾದವರೂ ಮತ್ತು ಷಟ್‌ಶಾಸ್ತ್ರಗಳಲ್ಲಿ ಪಾರಾಂಗತರಾದ ಸರ್ವ ಋಷಿಗಳೂ, ಬ್ರಾಹ್ಮಣರೂ, ಪುರಜನರೂ ಸಹಿತವಾಗಿ ಎಲ್ಲರೂ ಕೂಡಿದರು. ಜನಮೇಜಯರಾಜನು ಬಹುಮಾನಪೂರ್ವಕವಾಗಿ ಅವರವರಿಗೆ ಆಯಾ ಸ್ಥಾನಗಳಲ್ಲಿ ಕೂಡ್ರಿಸಿದನು. ಅಷ್ಟರಲ್ಲಿ ಅವರೊಳಗಿನ ಒಬ್ಬ ಭೂತಭವಿಷ್ಯಜ್ಞಾನಿಯಾದ ಬ್ರಾಹ್ಮಣನು

ಸಭಾಮಧ್ಯದಲ್ಲಿ ಎದ್ದು ನಿಂತು ಗಂಭೀರ ಸ್ವರದಿಂದ ಹೇಳಿದ್ದೇನಂದರೆ—"ಮಹಾರಾಜನೇ, ಈ ನಿನ್ನ ಸರ್ಪಯಾಗವು ಸಂಪೂರ್ಣವಾಗುವ ಸಂಭವವಿಲ್ಲ. ಪೂರ್ಣಾಹುತಿಯಾಗುವ ವೇಳೆಯಲ್ಲಿ ಒಬ್ಬ ಬ್ರಾಹ್ಮಣನು ಬಂದು ನಿನ್ನ ಯಜ್ಞವನ್ನು ನಿಲ್ಲಿಸಿ ಬಿಡುವನು" ಎಂದು ಭವಿಷ್ಯವನ್ನು ಹೇಳಲು, ಅದನ್ನು ಕೇಳಿ ಜನಮೇಜಯರಾಜನು ಕೋಪಾಯಮಾನನಾದನು.

---

## ೫ನೆಯ ಅಧ್ಯಾಯ.

# ಆಸ್ತೀಕ ಜನ್ಮ.



ವಾಚಕರೇ, ಹಿಂದಿನ ಅಧ್ಯಾಯದಲ್ಲಿ ಯಜ್ಞಮಂಟಪದೊಳಗೆ ಒಬ್ಬ ಬ್ರಾಹ್ಮಣನು ಎದ್ದು ನಿಂತು—"ಮಹಾರಾಜನೇ, ಸರ್ಪಯಾಗವು ಸಂಪೂರ್ಣವಾಗುವದಿಲ್ಲ. ಪೂರ್ಣಾಹುತಿಯಾಗುವ ಕಾಲಕ್ಕೆ ಒಬ್ಬ ಬ್ರಾಹ್ಮಣನು ಬಂದು ನಿನ್ನ ಯಜ್ಞವನ್ನು ನಿಲ್ಲಿಸಿ ಬಿಡುವನು" ಎಂದು ಭವಿಷ್ಯವನ್ನು ಕಥನ ಮಾಡಿದನೆಂದು ಹೇಳಿದೆವು. ಆದರೆ ಮಹಾರಾಜಾಧಿರಾಜನ ಸರ್ಪಯಾಗವೆಂದರೇನು? ಅದನ್ನು ಒಬ್ಬ ಬ್ರಾಹ್ಮಣನು ನಿಲ್ಲಿಸಿ ಬಿಡೋಣವೆಂದರೇನು? ಅಂತಹ ಮಹಾತ್ಮನಾದ ಬ್ರಾಹ್ಮಣನಾದರೂ ಯಾರಿರಬಹುದೆಂದು ನಿಮ್ಮ ಮನಸ್ಸಿನಲ್ಲಿ ವಿಚಾರವು ಬಂದಿರಬಹುದು. ಆದರೆ ಆ ಬ್ರಾಹ್ಮಣನ ಜನ್ಮಕಥನವನ್ನು ನಿಮಗೆ ಹೇಳಿ, ಆ ಮೇಲೆ ಯಜ್ಞವನ್ನು ನಿಲ್ಲಿಸಿದ ಸಂಗತಿಯನ್ನು ಮುಂದೆ ಹೇಳುವೆವು.

ಹಿಂದಕ್ಕೆ ಮಹಾ ತಪಸ್ವಿಯಾದ ಜರತ್ಕಾರನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು "ಲಗ್ನವನ್ನು ಮಾಡಿಕೊಂಡು ಸಂಸಾರವೆಂಬ ಮಾಯಾಪಾಶದಲ್ಲಿ ಸಿಕ್ಕಿಕೊಂಡರೆ ಮೋಕ್ಷಪ್ರಾಪ್ತಿಯಾಗುವದು ದುರ್ಲಭವು" ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಬ್ರಹ್ಮಚರ್ಯವ್ರತದಿಂದಲೇ ಇದ್ದು, ಸರ್ವದಾ ಬ್ರಹ್ಮಕರ್ಮದಲ್ಲಿಯೇ ನಿರತನಾಗಿದ್ದನು. ಯೌವನಾವಸ್ಥೆಯು ಹೋಗಿ ಅವನು ವೃದ್ಧನಾದರೂ ತಾನು ಲಗ್ನ ಮಾಡಿಕೊಳ್ಳಲಿಕ್ಕಿಲ್ಲೆಂಬ ಹಟವನ್ನು ಬಿಡಲಿಲ್ಲ. ಒಂದು ದಿವಸ ಆ ಬ್ರಾಹ್ಮಣನು ವನದಲ್ಲಿ ಆನಂದದಿಂದ ಸಂಚಾರ ಮಾಡುತ್ತಿರುವಾಗ ಅಲ್ಲಿ ಒಂದು ಭಾವಿಯನ್ನು ಕಂಡು ಅದರಲ್ಲಿ ಹಣಿಕಿ ಹಾಕಿ ನೋಡಲು,

ತಲೆ ಕೆಳಗಾಗಿ ಜೋತಾಡುತ್ತಿರುವ ಕೆಲವು ವ್ಯಕ್ತಿಗಳನ್ನು ಕಂಡನು. ಆಗಲವನು ಆಶ್ಚರ್ಯದಿಂದ--"ನೀವು ಯಾರು" ಎಂದು ಕೇಳಲಾಗಿ, ಅವರು ಮಹಾದುಃಖವನ್ನು ಮಾಡುತ್ತ ಅಂದದ್ದೇನಂದರೆ--"ಅಪ್ಪಾ, ನಾವು ನಿನ್ನ ಪಿತೃಗಣಗಳು. ನೀನು ಲಗ್ನವನ್ನು ಮಾಡಿಕೊಂಡು ನಿನ್ನಿಂದ ವಂಶಾಭಿವೃದ್ಧಿಯು ಆಗದೇ ಇದ್ದದರಿಂದ ನಮ್ಮ ವಂಶಖಂಡನವನ್ನು ಮಾಡಿದ ದೋಷಕ್ಕೆ ನೀನೇ ಪಾತ್ರನಾದಂತಾಯಿತು; ಆದ್ದರಿಂದ ನಮಗೆ ಸದ್ಗತಿಯಾಗದೆ ಈ ಅವಸ್ಥೆಯಲ್ಲಿರುವೆವು. ಈಗಲಾದರೂ ನೀನು ಗೃಹಸ್ಥಾಶ್ರಮಿಯಾಗಿ ನಿನ್ನಿಂದ ವಂಶಾಭಿವೃದ್ಧಿಯು ಆದರೆ ಅದರಿಂದ ನಾವೆಲ್ಲರೂ ಬ್ರಹ್ಮಪದವನ್ನು ಹೊಂದುವೆವು; ಆದಕಾರಣ ನಮ್ಮ ಇಚೆಯಂತೆ ಇನ್ನು ಮೇಲಾದರೂ ನೀನು ಲಗ್ನವನ್ನು ಮಾಡಿಕೊಂಡು ಮಕ್ಕಳನ್ನು ಪಡೆ" ಎಂದು ಹೇಳಲು, ಅದಕ್ಕೆ ಜರತ್ಕಾರನು ಒಪ್ಪಿ—"ನಿಮ್ಮ ಅಜ್ಞೆಯಂತೆ ಲಗ್ನ ಮಾಡಿಕೊಳ್ಳುವೆನು; ಆದರೆ ನನ್ನ ಹೆಸರಿನ ಕನ್ಯೆಯು ಸಿಕ್ಕರೇ ನಾನು ಗೃಹಸ್ಥಾಶ್ರಮಿಯಾಗಿ ವಂಶಾಭಿವೃದ್ಧಿಯನ್ನು ಮಾಡುವೆನು" ಎಂದು ಜರತ್ಕಾರನು ತನ್ನ ಪಿತೃಗಣಗಳಿಗೆ ಹೇಳಿ, ತಾನು ಕನ್ಯಾರ್ಥಿಯಾಗಿ ದೇಶದೇಶಗಳಲ್ಲಿ ಸಂಚಾರ ಮಾಡಹತ್ತಿದನು.

ಹೀಗೆ ಜರತ್ಕಾರನು ತಾನು ಯಾವ ಯಾವ ದೇಶಗಳಿಗೆ ಹೋಗುವನೋ? ಅಲ್ಲಲ್ಲಿ ಉಚ್ಚ ಸ್ವರದಿಂದ ಹೇಳುತ್ತಿದ್ದದ್ದೇನಂದರೆ—"ನನ್ನ ಪಿತೃಗಳ ಅಜ್ಞಾನುಸಾರವಾಗಿ ನಾನು ಲಗ್ನ ಮಾಡಿಕೊಳ್ಳಲಿಚ್ಛಿಸುವೆನು. ನನಗೆ ಕನ್ಯಾದಾನವನ್ನು ಮಾಡಿರಿ. ಜರತ್ಕಾರನೆಂಬ ನನ್ನ ನಾಮವು; ನನ್ನ ಹೆಸರಿನ ಕನ್ಯೆಯು ಸಿಕ್ಕರೇ ನಾನು ಲಗ್ನ ಮಾಡಿಕೊಳ್ಳುವೆನು. ನಾನು ವೃದ್ಧನು, ಶಕ್ತಿಹೀನನು; ಆದ್ದರಿಂದ ನನ್ನನ್ನು ಮದುವೆಯಾದ ಹೆಂಡತಿಗೆ ಅಶನವಶನಗಳನ್ನು ಕೊಟ್ಟು ಸಂರಕ್ಷಣೆ ಮಾಡುವ ಶಕ್ತಿಯೂ ನನ್ನಲ್ಲಿರುವದಿಲ್ಲ. ಅವಳು ಮಾತ್ರ ನನ್ನ ಆಜ್ಞಾಪ್ರಕಾರವಾಗಿ ನಡೆಯಲಿಕ್ಕೆ ಬೇಕು. ಒಂದು ವೇಳೆ ನನ್ನ ಅಜ್ಞೆಯನ್ನು ಉಲ್ಲಂಘನ ಮಾಡಿದರೆ ಆ ಕ್ಷಣದಲ್ಲಿಯೇ ನಾನು ಅವಳನ್ನು ಬಿಟ್ಟು ಹೋಗುವೆನು" ಹೀಗೆ ಸಾರುತ್ತಿದ್ದನು. ಅವನ ಮಾತುಗಳನ್ನು ಕೇಳಿ ದೇಶದೊಳಗಿನ ಜನರು—"ಸೈ! ಸೈ!! ಜನಕನೇ, ನೀನು ಇಂತಿಹ ವೃದ್ಧಾಪ್ಯ ಕಾಲದಲ್ಲಿ ಹೆಂಡತಿಯನ್ನು ಮಾಡಿಕೊಂಡು ಏನು ಸೌಖ್ಯವನ್ನು ಹೊಂದುವೆ? ಇದಂತೂ ಇರಲಿ. ಮಾಡಿಕೊಂಡ ಹೆಂಡತಿಗೆ ಅಶನವಶನಗಳನ್ನು ಕೊಡುವದಿಲ್ಲವಂತೆ; ಅಂದ ಮೇಲೆ ಹೆಂಡತಿಯೇ ಬಿಕ್ಕೇ ಬೇಡಿ ನಿನ್ನ ಹೊಟ್ಟೆಗೆ ಹಾಕಬೇಕಾಯಿತು. ಹುಚ್ಚ ಹಾರುವನೇ, ನೀನು ಹೇಳಿದಂತಿಹ ಕನ್ಯೆಯು ನಮ್ಮಲ್ಲಿರುವದಿಲ್ಲ" ಎಂದು ಅವನಿಗೆ ಚೇಷ್ಟೆಯನ್ನು ಮಾಡಿ ಕಳಿಸುತ್ತಿದ್ದರು. ಆದರೂ ಪಿತ್ರಾಜ್ಞೆಯಂತೆ ಆ ಜರತ್ಕಾರನು ಬೇಸರಿಯದೆ ಸ್ವರ್ಗಲೋಕದಲ್ಲಿಯೂ, ಮೃತ್ಯುಲೋಕದಲ್ಲಿಯೂ, ಅಷ್ಟದಿಕ್ಪಾಲಕರ ಲೋಕಗಳಲ್ಲಿಯೂ ಹೋಗಿ ಕನ್ಯಾರ್ಥಿಯಾಗಿ ಹೀಗೆಯೇ ಸಾರುತ್ತ ಎಷ್ಟು ಶೋಧ ಮಾಡಿದರೂ ತನ್ನ ಹೆಸರಿನ ಕನ್ಯೆಯು ಸಿಗದೇ ಇದ್ದದರಿಂದ ಜರತ್ಕಾರನು ಬೇಸತ್ತು ಪುನಃ ತನ್ನ ಪಿತೃಗಣಗಳಿದ್ದ ಭಾವಿಗೆ ಬಂದು—"ನಿಮ್ಮ ಅಜ್ಞಾನುಸಾರವಾಗಿ ಸ್ವರ್ಗ

ಮೃತ್ಯು ಮೊದಲಾದ ಲೋಕಗಳಲ್ಲಿ ನನ್ನ ಹೆಸರಿನ ಕನ್ಯೆಯನ್ನು ಶೋಧ ಮಾಡಿದೆನು. ಆದರೆ ಸಿಕ್ಕಲಿಲ್ಲ; ನಾನೇನು ಮಾಡಲಿ? ನಿಮ್ಮ ಪುಣ್ಯಫಲವೇ ಇಲ್ಲದಿದ್ದರೆ ಅದಕ್ಕೆ ಯಾರೇನು ಮಾಡುವರು? ಆದರೂ ಇನ್ನು ಪಾತಾಳಲೋಕವೊಂದು ಮಾತ್ರ ಉಳಿದಿರುವದು. ಅಲ್ಲಿಗೆ ಹೋಗಿ ಶೋಧ ಮಾಡುವೆನು. ಕನ್ಯೆಯು ಸಿಕ್ಕರೆ ಲಗ್ನ ಮಾಡಿಕೊಳ್ಳುವೆನು. ಇಲ್ಲದಿದ್ದರೆ ನಿಮಗೆ ಸದ್ಗತಿಯಾಗುವದು ನಿಮ್ಮ ಲಭ್ಯದಲ್ಲಿ ಇಲ್ಲವೆಂದು ತಿಳಿಯಿರಿ" ಎಂದು ಹೇಳಿ ಜರತ್ಕಾರನು ಪಾತಾಳಲೋಕಕ್ಕೆ ಹೋಗಿ ಅಲ್ಲಿಯಾದರೂ -"ನನ್ನ ಹೆಸರಿನ ಕನ್ಯೆಯು ಇದ್ದರೆ ಕನ್ಯಾದಾನವನ್ನು ಮಾಡಿಕೊಡಿರಿ" ಎಂದು ಕೂಗಹತ್ತಿದನು. ಅವನ್ನು ಸರ್ಪಗಳು ಕೇಳಿ, ತಮ್ಮ ರಾಜನಾದ ವಾಸುಕಿಯ ಮುಂದೆ ಹೇಳಿದ್ದೇನಂದರೆ----

"ರಾಜನೇ, ಮೃತ್ಯುಲೋಕದಿಂದ ಒಬ್ಬ ಮುದುಕನಾದ ಬ್ರಾಹ್ಮಣನು ನಮ್ಮ ಲೋಕಕ್ಕೆ ಕನ್ಯಾರ್ಥಿಯಾಗಿ ಬಂದಿರುವನು. ತನ್ನ ಹೆಸರಿನ ಕನ್ಯೆಯನ್ನು ದಾನವಾಗಿ ಕೊಟ್ಟರೆ ತಾನು ಲಗ್ನ ಮಾಡಿಕೊಳ್ಳುವನಂತೆ; ತನ್ನ ಹೆಸರು ಜರತ್ಕಾರನೆಂದು ಹೇಳಿಕೊಳ್ಳುವನು" ಎಂದು ಹಾಸ್ಯವನ್ನು ಮಾಡುತ್ತ ಹೇಳಿದರು. ಅದನ್ನು ಕೇಳಿ ವಾಸುಕಿಯು ತನ್ನ ಮನಸ್ಸಿನಲ್ಲಿ ಮುಂದಾಗುವ ಭವಿಷ್ಯವನ್ನು ತನ್ನ ಸ್ಮರಣೆಯಲ್ಲಿ ತಂದುಕೊಂಡು, ತನ್ನ ತಂಗಿಯಾದ ಜರತ್ಕಾರೆಯನ್ನು ಇವನಿಗೆ ಲಗ್ನ ಮಾಡಿ ಕೊಟ್ಟು ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗನಿಂದ ನಮ್ಮ ಸರ್ಪಕುಲವು ಉದ್ಧಾರವಾಗಬೇಕೆಂಬ ನೇಮವಿರುವದರಿಂದ ಈಗಲೇ ಆ ಜರಠನಾಗಿ ತೋರುತ್ತಿರುವ ಜರತ್ಕಾರನಿಗೆ ಕನ್ಯಾದಾನ ಮಾಡಿಕೊಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಆಗಲೇ ಅವನನ್ನು ಕರೆಸಿ ನೋಡಲಾಗಿ ವರನು ವೃದ್ಧನಾಗಿದ್ದರೂ ತಪಃಪ್ರಭಾವದಿಂದ ಪ್ರತಿಸೂರ್ಯನಂತೆ ಪ್ರಕಾಶಿಸುತ್ತಿರುವದನ್ನು ನೋಡಿ ಸಂತೋಷಪಟ್ಟನು. ಕೂಡಲೆ ಅವನು ಜರತ್ಕಾರೆಯನ್ನು ವಸ್ತ್ರಾಭರಣಗಳಿಂದ ಶೃಂಗರಿಸಿ ವರನಿಗೆ ತೋರಿಸಿ—

"ವಿಪ್ರವರ್ಯರೇ, ನೋಡಿರಿ; ಇವಳೇ ನಮ್ಮ ತಂಗಿಯು. ನಿಮ್ಮ ಹೆಸರಿನವಳೇ ಇರುವಳು. ಲಕ್ಷ್ಮೀದೇವಿಯಂತೆ ಲಾವಣ್ಯವತೆಯಾಗಿರುವಳು. ಇವಳನ್ನು ನಿಮ್ಮ ಧರ್ಮಪತ್ನಿಯಾಗಿ ಮಾಡಿಕೊಳ್ಳಿರಿ" ಎಂದು ವಾಸುಕಿಯು ಹೇಳಲು, ಅದಕ್ಕೆ ಜರತ್ಕಾರನು ಕನ್ಯೆಯನ್ನು ನೋಡಿ ಸಂತೋಷಪಟ್ಟು ಹೇಳಿದ್ದೇನಂದರೆ —"ಪಾತಾಳಲೋಕಾಧೀಶನೇ, ನೀನು ಹೇಳಿದಂತೆ ಕನ್ಯೆಯು ಬಹು ರೂಪವತಿಯು ಅಹುದು. ಪ್ರತ್ಯಕ್ಷ ರಂಭೆ ಊರ್ವಶಿ ಮೊದಲಾದ ಅಪ್ಸರಸ್ತ್ರೀಯರು ಇವಳ ದಾಸಿಯಾಗಲಿಕ್ಕೆ ಸಹ ಯೋಗ್ಯರಾಗಲಿಕ್ಕಿಲ್ಲ. ಇಂತಿಹ ಸುಂದರವಾದ ನಿಮ್ಮ ಕನ್ಯೆಯನ್ನು ನಾನು ಲಗ್ನ ಮಾಡಿಕೊಳ್ಳಲೊಪ್ಪುವೆನು. ಆದರೆ ಇವಳು ನನ್ನ ಕೂಡ ನಮ್ರತೆಯಿಂದ ನಡೆದು ಮೃದುವಚನಗಳನ್ನೇ ಆಡುತ್ತ ನನ್ನ ಮನಸ್ಸನ್ನು ಸರ್ವದಾ ಪ್ರಸನ್ನೀಕರಿಸಿಕೊಳ್ಳಬೇಕು. ಹೀಗಲ್ಲದೆ ತನ್ನ ತೌರಮನೆಯವರು ಬಲವಂತರಿರುವರೆಂಬ ಗರ್ವದಿಂದ ನನ್ನನ್ನು ತೃಣಸಮಾನವೆಂದು ತಿಳಿದು ನನ್ನ ಆಜ್ಞಾಭಂಗವನ್ನು ಮಾಡಿದರೆ ಇವಳನ್ನು ಆ ಕ್ಷಣದಲ್ಲಿಯೇ ತ್ಯಾಗ ಮಾಡುವೆನು. ನಾನು ಅಂತಿಹ

ಊಟವನ್ನೇ ನಡೆಸತಕ್ಕವನು; ಮಹಾ ಕೋಪಿಷ್ಠನು. ಆದಕಾರಣ ಇದನ್ನೆಲ್ಲ ನೀನು ವಿಚಾರ ಮಾಡಿ, ಈ ನನ್ನ ನೇಮದಂತೆ ನಿನ್ನ ತಂಗೆಯು ನಡೆಯುವದಕ್ಕೆ ಸಮ್ಮತವಿದ್ದರೆ ಅಗತ್ಯವಾಗಿ ಪಾಣಿಗ್ರಹಣ ಮಾಡುವೆನು" ಎಂದು ಜರತ್ಕಾರನು ಸ್ಪಷ್ಟವಾಗಿ ಹೇಳಲು, ಅದಕ್ಕೆ ವಾಸುಕಿಯು - "ಬ್ರಾಹ್ಮಣನೇ, ನನ್ನ ಭಗಿನಿಯು ಅಂತಿಹ ದುಷ್ಟ ಗುಣದವಳಲ್ಲ. ಮಹಾಶಿಷಳೂ, ಚಾತುರ್ಯವತಿಯೂ ಪತಿಭಕ್ತಿಯಲ್ಲಿ ಪರಮತತ್ಪರಳೂ ಆಗಿರುವಳು. ಇವಳಿಗೆ ವಸ್ತ್ರಭೂಷಣಗಳನ್ನು ಸರ್ವದಾ ನಾನೇ ಕೊಡುವೆನು; ಇವಳನ್ನು ಸ್ವೀಕಾರ ಮಾಡಬೇಕು" ಎಂದು ಬೇಡಿಕೊಳ್ಳಲು, ಆಗ ಜರತ್ಕಾರನು ಆ ಮಾತಿಗೆ ಒಪ್ಪಿಕೊಳ್ಳಲಾಗಿ ವಾಸುಕಿಯು ಸುಮುಹೂರ್ತದಲ್ಲಿ ಅವಳ ವಿವಾಹವನ್ನು ಮಾಡಿದನು. ಆ ಮೇಲೆ ಅವನು ತನ್ನ ನೂತನ ಪತ್ನಿಯನ್ನು ಕರೆದುಕೊಂಡು ತನ್ನ ಆಶ್ರಮಕ್ಕೆ ಬಂದನು.

ಆ ಮೇಲೆ ಕೇಳುವದೇನು? ವಾಸುಕಿಯು ಅವರಿಗೆ ಇರುವದಕ್ಕಾಗಿ ಒಂದು ಸುವರ್ಣಮಯವಾದ ಮನೆಯನ್ನು ಕಟ್ಟಿಸಿ, ಅಪಾರವಾದ ಸಂಪತ್ತನ್ನು ಅದರಲ್ಲಿ ತುಂಬಿಸಿದನು; ಮತ್ತು ನಿತ್ಯದಲ್ಲಿ ಇವರ ಸೇವೆಯನ್ನು ಮಾಡುವದಕ್ಕೆ ಅನೇಕ ದಾಸದಾಸೀ ಜನರನ್ನು ಕಳಿಸಿದನು. ಈ ಪ್ರಕಾರ ಆ ದಂಪತಿಗಳು ಸರ್ವ ಸಂಪತ್ತಿನಿಂದ ಯುಕ್ತರಾಗಿ ರಾಜಭೋಗಗಳನ್ನು ಭೋಗಿಸುತ್ತ ಇರುತ್ತಿದ್ದರು. ಜರತ್ಕಾರನು ನಿತ್ಯ ನೈಮಿತ್ತಿಕ ಕರ್ಮಗಳನ್ನು ಯಥಾಸಾಂಗವಾಗಿ ನಡೆಸುತ್ತ, ತನ್ನ ಆಶ್ರಮದಲ್ಲಿ ಅನ್ನಸತ್ರವನ್ನು ಇಟ್ಟು ದಿನಾಲು ಅನ್ನದಾನವನ್ನು ಮಾಡುತ್ತ, ಮನೆಗೆ ಬಂದ ಅತಿಥಿಗಳನ್ನು ಪೂಜಿಸುತ್ತ ಸರ್ವೋತ್ಕೃಷ್ಟನಾಗಿದ್ದನು. ಜರತ್ಕಾರೆಯಾದರೂ ಪತಿಯ ಅನುಮತಿಯಂತೆ ನಡೆದು ಪತಿಸೇವೆಯಲ್ಲಿ ಪರಮತತ್ಪರಳಾಗಿ ಅತನ ಮನಸ್ಸನ್ನು ಆನಂದಪಡಿಸುತ್ತ ಸಂತೋಷದಿಂದ ಇರುತ್ತಿರಲು ಅವಳು ಸ್ವಲ್ಪ ದಿವಸಗಳಲ್ಲಿ ಗರ್ಭಿಣಿಯಾದಳು.

ಹೀಗೆ ಆ ದಂಪತಿಗಳು ಸೌಖ್ಯದಿಂದ ಕಾಲಕ್ರಮಣ ಮಾಡುತ್ತಿರಲು, ಒಂದು ದಿವಸ ಜರತ್ಕಾರನು ತನ್ನ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಭೋಜನವನ್ನು ಮಾಡಿ ನಿದ್ರಾದೇವಿಯು ಪೀಡಿಸಲು ಅವನು ತನ್ನ ಹೆಂಡತಿಯ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿ ಘೋರವಾದ ನಿದ್ರೆಯನ್ನು ಮಾಡಹತ್ತಿದನು. ಹೊತ್ತು ಮುಳಗುತ್ತ ಬಂದರೂ ಅವನಿಗೆ ಎಚ್ಚರಿಕೆಯೇ ಆಗದೆ ಇದ್ದದರಿಂದ ಜರತ್ಕಾರೆಯು ಮನಸ್ಸಿನೊಳಗೆ ಆಲೋಚಿಸಿದ್ದೇನಂದರೆ "ಈಗ ಸೂರ್ಯಾಸ್ತಸಮಯವಾಯಿತು. ಇವರ ನಿತ್ಯ ಕರ್ಮಾನುಷ್ಠಾನದ ವೇಳೆಯು ಆಗಿರುವದರಿಂದ ಒಂದು ವೇಳೆ ಇವರನ್ನು ಎಬ್ಬಿಸಿದರೆ ಪತಿಯ ನಿದ್ರಾಭಂಗ ಮಾಡಿದ ದೋಷಕ್ಕೆ ಪಾತ್ರನಾಗುವೆನು. ಎಬ್ಬಿಸದಿದ್ದರೆ ನನ್ನ ಸಂಧ್ಯಾಕರ್ಮಕ್ಕೆ ಹಾನಿಯನ್ನು ತಂದೆ" ಎಂದು ಎಲ್ಲಿ ನನ್ನ ಮೇಲೆ ಕೋಪಿಷ್ಠರಾಗುವರೋ ಏನೋ? ಇದಕ್ಕೆ ಹೇಗೆ ಮಾಡಲಿ? ಈ ಎರಡು ದೋಷಗಳಲ್ಲಿ ಯಾವದು ಹೆಚ್ಚಿನದು? ಯಾವದು ಸಾಮಾನ್ಯವಾದದ್ದು? ಎಂಬುವದನ್ನು ವಿಚಾರ ಮಾಡಿ ನೋಡಲು, ನಿದ್ರಾಭಂಗವನ್ನು ಮಾಡಿದರೆ

ರಾತ್ರೀ ಕಾಲದಲ್ಲಿ ಪುನಃ ನಿದ್ರೆಯನ್ನು ಮಾಡಲಿಕ್ಕೆ ಬರುತ್ತದೆ. ಆದರೆ ಸಂಧ್ಯಾಕರ್ಮ ವನ್ನು ಮೀರಿದರೆ ಅದಕ್ಕೆ ಮಹಾ ಪ್ರಾಯಶ್ಚಿತ್ತವಿರುವದು. ಅಂದ ಮೇಲೆ ಈಗ ಪತಿ ಯನ್ನು ಎಬ್ಬಿಸುವದೇ ಯೋಗ್ಯವು" ಎಂದು ನಿಶ್ಚಯಿಸಿ ಜರತ್ಕಾರೆಯು ಪತಿಯ ಕಾಲು ಗಳನ್ನು ಒತ್ತುತ್ತ—"ಏಳಬೇಕು; ಸೂರ್ಯಾಸ್ತ ಸಮಯವಾಗಿರುವದು, ನಿಮ್ಮ ನಿತ್ಯ ಕರ್ಮಾನುಷ್ಠಾನಗಳನ್ನು ನೆರವೇರಿಸಿ ರಾತ್ರೀ ಕಾಲದಲ್ಲಿ ಸುಖಶಯನವನ್ನು ಮಾಡಬೇಕು" ಎಂದು ಹೇಳಲು, ಜರತ್ಕಾರನು ಎದ್ದು ಕ್ರೋಧಪರವಶನಾಗಿ—"ಎಲೇ ಸುಕುಮಾರಿಯೇ, ನಿನ್ನ ತೊಡೆಯ ಮೇಲೆ ನನ್ನ ತಲೆಯನ್ನಿಟ್ಟು ಮಲಗಿದರೆ ನಿನಗೆ ಭಾರವಾಯಿತೆಂದು ನನ್ನನ್ನು ಎಬ್ಬಿಸಿದೆಯಾ? ಈ ಜರತ್ಕಾರನು ನಿದ್ರೆಯಿಂದ ಏಳದೆ, ಅರ್ಘ್ಯಪ್ರಧಾನವನ್ನೂ, ಅಗ್ನಿಸೇವೆಯನ್ನೂ ಮಾಡದೆ, ಸೂರ್ಯನು ಅಸ್ತಂಗತನಾಗುತ್ತಿದ್ದನೇ? ಅವನ ಧೈರ್ಯ ವಾದರೂ ಹೇಗಾದೀತು? ಇದರ ಪರೀಕ್ಷೆಯನ್ನು ಮಾಡಿ ನೀನು ಸ್ವಲ್ಪ ವೇಳೆ ನೋಡ ತಕ್ಕದ್ದಿತ್ತು. ಎಲೇ ಗರ್ವಿಷ್ಠಳೇ, ವೃದ್ಧನಾದ ನನ್ನನ್ನು ನೋಡಿ ಚೇಷ್ಟೆಯನ್ನು ಮಾಡು ತ್ತೀಯಾ? ಇಕೋ, ನೀನು ನನ್ನ ಅಜ್ಞಾಭಂಗವನ್ನು ಮಾಡಿದ್ದರಿಂದ ಈಗಲೇ ನಿನ್ನನ್ನು ಬಿಟ್ಟು ಹೊರಟು ಹೋಗುವೆನು. ಇನ್ನು ಮೇಲೆ ಸುಖದಿಂದ ನಿನ್ನ ಅಣ್ಣನ ಮನೆಯಲ್ಲಿ ಇರು" ಎಂದು ಆ ಕೋಪಿಷ್ಠನಾದ ಜರತ್ಕಾರನು ಇಷ್ಟು ಮಾತಿಗೇ ತನ್ನ ಸ್ತ್ರೀಯಳನ್ನು ಬಿಟ್ಟು ನಡೆದನು.

ಹೀಗೆ ಪತಿಯು ತನ್ನನ್ನು ಬಿಟ್ಟು ಹೋದದ್ದನ್ನು ನೋಡಿ ಗಾಬರಿಯಾಗಿ ಅವರ ಬೆನ್ನು ಹತ್ತಿ ಓಡಿ ಹೋಗಿ ಜರತ್ಕಾರೆಯು ಘಟ್ಟಿಯಾಗಿ ಪಾದಗಳನ್ನು ಹಿಡಿದು-"ಸ್ವಾಮೀ ನಾನು ತಮ್ಮ ನಿದ್ರಾಭಂಗ ಮಾಡಿದ್ದು ಮಹದಪರಾಧವಾಯಿತು. ತಾವು ನನಗೆ ಕ್ಷಮೆ ಯನ್ನು ಮಾಡಿ ತಿರಿಗಿ ಮನೆಗೆ ಬರಬೇಕು" ಎಂದು ಬೇಡಿಕೊಳ್ಳಲು, ಜರತ್ಕಾರನು ಮತ್ತಿಷ್ಟು ಕೋಪದಿಂದ—"ಪಾಪಿಷ್ಠಳೇ ನನಗೆ ಹೆಚ್ಚು ಆಗ್ರಹವನ್ನು ಮಾಡಿದರೆ ನಿನಗೆ ಶಾಪವನ್ನು ಕೊಟ್ಟು ಭಸ್ಮ ಮಾಡಿ ಬಿಡುವೆನು" ಎಂದು ಗರ್ಜಿಸಲು, ಅವಳು ಹೆದರಿ ಥರ ಥರ ನಡುಗಹತ್ತಿದಳು. ಆ ಜರತ್ಕಾರೆಯ ಸಂಗಡ ಬಂದಿದ್ದ ನಾಗಸೇವಕರೆಲ್ಲರು ಋಷಿಯ ಕೋಪಕ್ಕೆ ಹೆದರಿ, ಅವನ ಎದುರಿಗೆ ಹೋಗುವದಕ್ಕೆ ಯಾರಿಗೂ ಧೈರ್ಯ ಸಾಲದೆ ಅಲ್ಲಲ್ಲಿ ಅಡಗಿಕೊಂಡರು. ಜರತ್ಕಾರೆಯು ಮಾತ್ರ ಏನಾದದ್ದಾಗಲೆಂದು ಪುನಃ ತನ್ನ ಪತಿಯ ಬೆನ್ನು ಹತ್ತಿ—"ಮಹಾರಾಯನೇ, ನೀನು ಸತ್ವಶಾಲಿಯು; ಅಪರಾಧವಿಲ್ಲದೆ ಸುಮ್ಮನೇ ನನ್ನನ್ನು ತ್ಯಾಗ ಮಾಡಬಾರದು" ಎಂದು ತನ್ನ ಮೃದುವಾದ ತೋಳನ್ನೆತ್ತಿ ಘಟ್ಟಿಯಾಗಿ ಕೂಗುತ್ತ ಓಡುತ್ತಿರಲು, ಒಮ್ಮೆ ಎಡವಿ ಭೂಮಿಯ ಮೇಲೆ ಬಿದ್ದು, ಪುನಃ ಚೇತರಿಸಿಕೊಂಡು ಹಾಗೆಯೇ ಬೆನ್ನು ಹತ್ತಿ—"ತಪೋಧನರೇ, ಹೀಗೆಯೇ ಈ ಅರಣ್ಯ ದಲ್ಲಿ ಅನಾಥಳಾದ ನನ್ನನ್ನು ಬಿಟ್ಟು ಹೋಗಬೇಡಿರಿ. ನಾನು ತಮಗೆ ಬೇಡಾದರೆ ಇಲ್ಲಿಯೇ ನನ್ನನ್ನು ಕೊಂದು ಹಾಕಿ ಹೋಗಿರಿ. ಸ್ವಾಮಿನ್, ಇದಲ್ಲದೆ ತಾವು ತ್ರಿಕಾಲಜ್ಞಾನಿಗಳು.

ನನ್ನಲ್ಲಿ ಕಾಪಟ್ಯವಿರುವದೋ? ಅಥವಾ ತಿಳಿಯದೆ ಭೋಳೇ ಸ್ವಭಾವದಿಂದ ಪಬ್ಬಿಸಿದೆನೋ? ಇದನ್ನು ನೀವೇ ಮನಸ್ಸಿನಲ್ಲಿ ವಿಚಾರ ಮಾಡಿ ನನ್ನ ಪರೀಕ್ಷೆಯನ್ನು ಮಾಡಿರಿ" ಎಂದು ಆರ್ತಸ್ವರದಿಂದ ಒದರುತ್ತ ತನ್ನ ಪತಿಯ ಬೆನ್ನು ಹತ್ತಿ ನಡೆದಳು.

ಹೀಗೆ ತನ್ನ ಸ್ತ್ರೀಯಳು ಬೆನ್ನು ಹತ್ತಿ ಅಳುತ್ತ ಬರುತ್ತಿರಲು, ಜರತ್ಕಾರನು ಹಿಂದಿರಿಗಿ ನೋಡಿ, ಕಷ್ಟಪಡುತ್ತ ತನ್ನನ್ನು ಹಿಂಬಾಲಿಸಿ ರೋದನವನ್ನು ಮಾಡುತ್ತ ಬರುತ್ತಿರುವದನ್ನು ಕಂಡು ಆಗಲೇ ಅವನ ಹೃದಯವು ಕರಿಗಿ ದುಃಖದಿಂದ ಕಣ್ಣೀರನ್ನು ಸುರಿಸುತ್ತ ಸ್ವಲ್ಪ ನಿಲ್ಲಲು, ಜರತ್ಕಾರೆಯು ಸಮೀಪಕ್ಕೆ ಬಂದು "ಸ್ವಾಮೀ, ನನ್ನ ಮೇಲೆ ಕೃಪೆಯನ್ನು ಮಾಡಿ ಮನೆಗೆ ಬರಬೇಕು" ಎಂದು ಪುನಃ ಬೇಡಿಕೊಂಡಳು. ಅದಕ್ಕೆ ಜರತ್ಕಾರನು— "ಸತಿಯೇ, ನಾನು ಎಂದಿಗೂ ತಿರಿಗಿ ಬರಲಾರೆನೆಂದು ತಿಳಿ; ನೀನು ಮನೆಗೆ ನಡೆ" ಎಂದು ಹೇಳಲು ಜರತ್ಕಾರೆಯು—"ಪತಿಯೇ, ನಿಮ್ಮ ಆಜ್ಞಾಭಂಗವನ್ನು ಮಾಡಿದರೆ ನಾನು ದೋಷಕ್ಕೆ ಪಾತ್ರಳಾನೇನು? ಒಂದು ವೇಳೆ ತಮ್ಮ ಆಜ್ಞೆಯಂತೆ ನಾನು ಮನೆಗೆ ಹೋಗಲಿಕ್ಕೂ ಪ್ರತಿಬಂಧಕವಿಲ್ಲ; ಆದರೆ ತಮ್ಮಿಂದ ನನಗೆ ಪುತ್ರಫಲವು ದೊರೆಯಲಿಲ್ಲ; ಅಂದ ಮೇಲೆ ತಮ್ಮ ಪಿತೃಗಣಗಳು ಹೇಗೆ ಉದ್ಧೃತರಾಗುವರು? ಇವಲ್ಲದೆ ನನ್ನ ಬಂಧುಗಳಾದ ಸರ್ಪಗಳು 'ಜನಮೇಜಯರಾಜನ ಸರ್ಪಯಾಗದಲ್ಲಿ ನಾಶವಾಗಲಿ' ಎಂದು ಅವರ ತಾಯಿಯಾದ ಕದ್ರುದೇವಿಯಿಂದ ಶಾಪಗ್ರಸ್ತರಾಗಿರುವದು; ಅದಕ್ಕಾಗಿ ಅವರಿಗೆ ಸ್ವಲ್ಪ ಸ್ವಸ್ತಿಕ್ಷೇಮವಾಗಬೇಕೆಂದು ನನಗೆ ವೀರ್ಯದಾನವನ್ನು ಮಾಡಿ ಪುತ್ರನಾಗುವಂತೆ ಅನುಗ್ರಹ ಮಾಡಿದರೆ ಅವನೇ ಸರ್ಪಕುಲವನ್ನು ರಕ್ಷಿಸುವನೆಂಬ ನೇಮವಿರುವದು; ಆದ್ದರಿಂದ ಇಷ್ಟಾದರೂ ನನ್ನ ಮೇಲೆ ಅನುಗ್ರಹ ಮಾಡಬೇಕು" ಎಂದು ಬೇಡಿಕೊಂಡಳು.

ಹೀಗೆ ತನ್ನ ಸತಿಯು ಪುತ್ರಾಪೇಕ್ಷೆಯಿಂದ ಬೇಡಿಕೊಳ್ಳುತ್ತಿರಲು, ಜರತ್ಕಾರನು – "ಪ್ರಿಯಳೇ, ನೀನೇನೂ ಚಿಂತಿಸಬೇಡ. ನಿನ್ನ ಗರ್ಭಶುಕ್ತಿಕೆಯಲ್ಲಿ ಆಸ್ತೀಕನೆಂಬ ಮುಕ್ತಾಫಲವನ್ನು ಹೊಂದಿರುವೆ. ಅವನು ಸೂರ್ಯನಂತೆ ಪ್ರತಾಪಶಾಲಿಯೂ, ವಶಿಷ್ಠ, ವಾಮದೇವ, ಶುಕ್ರಾಚಾರ್ಯರಂತೆ ಮಹಾ ತಪಸ್ವಿಯೂ, ಜಗದ್ವಿಖ್ಯಾತನೂ ಆಗುವನು. ಅವನೇ ಉಭಯ ಕುಲವನ್ನು ಉದ್ಧರಿಸುವನು. ಇನ್ನು ಮೇಲೆ ನಿಮ್ಮ ಅಣ್ಣನ ಮನೆಗೆ ಹೋಗು" ಎಂದು ವರಪ್ರದಾನ ಮಾಡಿ ಜರತ್ಕಾರನು ನೋಡನೋಡುವಷ್ಟರಲ್ಲಿ ಅಲ್ಲಿಯೇ ಮಾಯವಾದನು. ಆಗ ಜರತ್ಕಾರೆಯು ಪತಿವಿಯೋಗವನ್ನು ತಡೆಯಲಾರದೆ ಮೂರ್ಛೆಯನ್ನು ಹೊಂದಿ ಭೂಮಿಯಲ್ಲಿ ಬೀಳಲು, ಸೇವಕರು ಅವಳನ್ನು ಸಾವಧಗೊಳಿಸಿ ಮನೆಗೆ ಕರಕೊಂಡು ಹೋಗಿ ವಾಸುಕಿಯ ಮುಂದೆ ಸರ್ವ ವೃತ್ತಾಂತವನ್ನು ನಿವೇದನ ಮಾಡಿದರು. ಆಗ ವಾಸುಕಿಯು ಸಖೇದಾನಂದವನ್ನು ಪಟ್ಟು—"ಅನುಜಳೇ, ಪತಿವಿಯೋಗದಿಂದ ನಿನಗೆ ದುಃಖವಾಯಿತು. ಆದಾಗ್ಯೂ ನಿನಗೆ ಏನೂ ಕೊರತೆ ಬಾರದಂತೆ ನಿನ್ನನ್ನು ಸಂರಕ್ಷಿಸುವೆನು; ಆದರೆ ನಮ್ಮ ಸರ್ಪಕುಲಕ್ಕೆ ಕ್ಷೇಮವಾಗುವಂತೆ ಅಭಯದಾನವನ್ನು ಮಾಡು"

ಎಂದು ಬೇಡಿಕೊಳ್ಳಲು, ಜರತ್ಕಾರೆಯು—"ಅಣ್ಣಾ, ನೀನೇನೂ ಚಿಂತಿಸಬೇಡ; ನಿಮ್ಮ ಸರ್ಪಕುಲವನ್ನು ರಕ್ಷಿಸುವಂಥ ಅಸ್ತೀಕನು ನನ್ನ ಗರ್ಭದಲ್ಲಿರುವನು" ಎಂದು ಹೇಳಲು, ಅವರೆಲ್ಲರಿಗೆ ಆನಂದವೇ ಆನಂದವಾಯಿತು.

ಮುಂದೆ ಜರತ್ಕಾರೆಗೆ ನವಮಾಸಗಳು ಪೂರ್ಣವಾಗಿ ಹತ್ತನೆಯ ತಿಂಗಳದಲ್ಲಿ ಪುತ್ರ ರತ್ನವನ್ನು ಪಡೆಯಲು, ನಾಗಲೋಕದಲ್ಲಿ ತಮ್ಮ ಕುಲವನ್ನು ರಕ್ಷಿಸುವಂಥ ಅಸ್ತೀಕನು ಹುಟ್ಟಿದನೆಂಬ ಸಂತೋಷದಿಂದ ಗುಡಿ ತೋರಣಗಳನ್ನು ಕಟ್ಟಿ ಉತ್ಸವವನ್ನು ಮಾಡಿದರು. ಹನ್ನೆರಡನೇ ದಿವಸದಲ್ಲಿ ಆ ಕೂಸಿಗೆ ಅಸ್ತೀಕನೆಂದು ನಾಮವನ್ನಿಟ್ಟರು. ಅವನು ಐದು ವರ್ಷದವನಾಗಲು, ಅವನನ್ನು ಚ್ಯವನ, ಭಾರ್ಗವ ಋಷಿಗಳ ಹತ್ತರ ಇಟ್ಟು ವಾಸುಕಿಯು ವಿದ್ಯಾಭ್ಯಾಸವನ್ನು ಮಾಡಿಸಿದನು. ಸ್ವಲ್ಪ ದಿವಸಗಳಲ್ಲಿಯೇ ಷಟ್‌ಶಾಸ್ತ್ರಗಳಲ್ಲಿ ನಿಪುಣ ನಾಗಿ ಬ್ರಹಸ್ಪತ್ಯಾಚಾರ್ಯರಂತೆ ವಕ್ತೃತ್ವಶಾಲಿಯಾಗಿಯೂ, ಸೂರ್ಯನಂತೆ ತೇಜೋವಂತ ನಾಗಿಯೂ, ಚಂದ್ರನಂತೆ ಶಾಂತನಾಗಿಯೂ, ತಪೋನಿಷ್ಠನಾಗಿಯೂ ವಿರಾಜಿಸುತ್ತಿದ್ದನು.

---

## ೬ನೆಯ ಅಧ್ಯಾಯ.

# ವರಪ್ರದಾನ.



ವಾಚಕರೇ, ನಿಮಗೆ ಅಸ್ತೀಕನ ಜನ್ಮಕಥೆಯನ್ನು ಹೇಳಿದೆವು. ಇನ್ನು ಮೇಲೆ ಸರ್ಪಯಾಗ ಸಿದ್ಧತೆಯನ್ನು ಮಾಡಿದ ಆ ಜನಮೇಜಯರಾಜನ ಯಜ್ಞ ಮಂಟಪದಲ್ಲಿ ಏನೇನು ನಡೆಯುತ್ತದೆಂದು ತಿಳುಕೊಳ್ಳುವದಕ್ಕಾಗಿ ಅಲ್ಲಿಗೆ ಹೋಗುವಾ, ನಡೆಯಿರಿ.

ಜನಮೇಜಯರಾಜನು ಯಜ್ಞಮಂಟಪದಲ್ಲಿ ತನ್ನ ಧರ್ಮಪತ್ನಿಯಾದ ವಪುಷ್ಟಮಾ ದೇವಿಯಿಂದ ಸಹಿತನಾಗಿ ಯಜ್ಞದೀಕ್ಷೆಯನ್ನು ಕೈಕೊಂಡು, ವಿಸ್ತಾರವಾದ ಯಜ್ಞಕುಂಡ ದಲ್ಲಿ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ, ಧ್ಯಾನಾವಾಹನಾದಿಗಳಿಂದ ಪೂಜಿಸಿ, ಆಹುತಿ ಗಳನ್ನು ಕೊಡುವದಕ್ಕೆ ಋತ್ವಿಜರಿಂದ ಅನುಜ್ಞೆಯನ್ನು ಪಡೆದು, ಹಸ್ತಿಶುಂಡಾಪ್ರಮಾಣ ವಾದ ವಸುಧಾರೆಯನ್ನು ಅಗ್ನಿನಾರಾಯಣನಿಗೆ ಸಮರ್ಪಣೆ ಮಾಡಿದನು. ಆ ಮೇಲೆ ಜನಮೇಜಯರಾಜನು—"ವಿಪ್ರವರ್ಯರೇ, ಇನ್ನು ಮೇಲೆ ಸರ್ಪಗಳು ಅಗ್ನಿಕುಂಡದಲ್ಲಿ

ಬಿಂದು ಬೀಳುವಂತೆ ಮಂತ್ರೋಚ್ಚಾರವನ್ನು ಮಾಡಿ ಸರ್ಪಹೋಮಕ್ಕೆ ಪ್ರಾರಂಭ ಮಾಡ ಬೇಕೆಂದು ಬೇಡಿಕೊಳ್ಳಲು, ಆಗಲಾಋತ್ವಿಜರು ಅಗ್ನಿಕುಂಡದಲ್ಲಿ ಸರ್ಪಗಳು ಬಂದು ಬೀಳುವಂತೆ ಸಮಿಧೆಗಳನ್ನು ಅಭಿಮಂತ್ರಿಸಿ ಹಾಕಲು, ನಾಗಲೋಕದಲ್ಲಿರುವ ಸರ್ಪಗಳ ಸಮುದಾಯವೇ ಯಜ್ಞಕುಂಡದಲ್ಲಿ ಬಂದು ಬಿದ್ದು ಆಹುತಿಯಾಗಹತ್ತಿದವು. ಅದನ್ನು ಕಂಡು ಅನೇಕ ಸರ್ಪಗಳು ತಮ್ಮ ಮರಣವನ್ನು ತಪ್ಪಿಸುವದಕ್ಕಾಗಿ ಯಾರಿಗೂ ಕಾಣಿಸ ಬಾರದೆಂಬ ಭ್ರಮೆಯಿಂದ ಆಕಾಶಪಥದಲ್ಲಿ ಹಾರಾಡುತ್ತಿದ್ದವು. ಅವು ಸಹ ಋಷಿಗಳ ಮಂತ್ರಬಲದಿಂದ ಯಜ್ಞಕುಂಡದಲ್ಲಿ ಬಂದು ಬೀಳುತ್ತಿದ್ದವು. ಕೆಲವು ಘಟಸರ್ಪಗಳು ಗಿಡಗಳಿಗೆ ಸುತ್ತು ಹಾಕಿಕೊಂಡು “ನಮಗೆ ಇನ್ನೇನು ಭಯವು?” ಎಂದು ನಿರ್ಭಯದಿಂದ ಇರುತ್ತಿದ್ದವು. ಕೆಲವು ಹಾವುಗಳು ದೊಡ್ಡವಾದ ಶಿಲೆಗಳನ್ನು ಸುತ್ತುಗಟ್ಟಿಕೊಂಡು ಕುಳಿತಿದ್ದವು. ಅಂತಿಹ ಸರ್ಪಗಳನ್ನು ಋಷಿಗಳು ಆವಾಹನ ಮಾಡಿ ಮಂತ್ರೋಚ್ಚಾರ ವನ್ನು ಮಾಡಿದ ಕೂಡಲೆ ವೃಕ್ಷಶಿಲೆಗಳಿಂದ ಸಹಿತವಾಗಿ ಸರ್ಪಗಳು ಅಗ್ನಿಕುಂಡದಲ್ಲಿ ಬಿದ್ದು ಸುಟ್ಟು ಬೂದಿಯಾಗುತ್ತಿದ್ದವು. ಹೀಗೆ ಸರ್ಪಗಳು ನಾಶವಾಗಹತ್ತಲು, ನಾಗಲೋಕ ದಲ್ಲಿ ಹಾಹಾಕಾರವೇ ಎದ್ದಿತು- ಆಗ ಸರ್ಪಗಳು ಒಂದನ್ನೊಂದು ಅಪ್ಪಿಕೊಂಡು- “ನಮ್ಮೆಲ್ಲರಿಗೂ ಪ್ರಳಯಕಾಲವೇ ಪ್ರಾಪ್ತವಾಯಿತಲ್ಲ. ಹೇಗೆ ಮಾಡೋಣ? ಎಲ್ಲಿಗೆ ಹೋದರೆ ನಮಗೆ ಸಾವು ತಪ್ಪೀತು?” ಎಂದು ದುಃಖವನ್ನು ಮಾಡಹತ್ತಿದವು.

ಹೀಗೆ ಆ ಬ್ರಾಹ್ಮಣರ ಮಂತ್ರಸಾಮರ್ಥ್ಯದಿಂದ ಅಂಥ ಇಂಥ ಸರ್ಪಗಳು ನಾಶ ವಾಗುವದಲ್ಲದೆ, ಕಾಡಿಗೆಯಂತೆ ಕಪ್ಪಾಗಿಯೂ, ಅಗ್ನಿಜ್ವಾಲೆಯಂತೆ ಉರಿಯುತ್ತಿರುವ ಕೆಂಪಗಾದ ಕಣ್ಣುಗಳುಳ್ಳವಾಗಿಯೂ, ದೂರ್ವಾರಂಗದಂತಿರುವ ಹಸರು ಬಣ್ಣಗಳುಳ್ಳ ವಾಗಿಯೂ, ಚಿತ್ರವಿಚಿತ್ರವಾದ ಚಿಕ್ಕೆಗಳಿಂದ ಯುಕ್ತವಾದ ಹಳದೀ ಬಣ್ಣಗಳುಳ್ಳ ವಾಗಿಯೂ ಮತ್ತು ಕರಡಿಯಂತೆ ಮೈತುಂಬ ಕೂದಲುಗಳಿಂದ ಯುಕ್ತವಾಗಿ ಹೆಡೆಯಲ್ಲಿ ಪ್ರಕಾಶಿಸುತ್ತಿರುವ ರತ್ನಗಳುಳ್ಳವಾಗಿಯೂ, ದುಘುಃಕಾರವನ್ನು ಮಾಡುತ್ತಿರುವಾಗ ಮುಖ ದಿಂದ ಸುವಾಸವನ್ನು ಬೀರುವವಾಗಿಯೂ ಇರುವ ಅನೇಕಾನೇಕ ಮುದಿಹಾವುಗಳೂ, ಇವುಗಳಲ್ಲದೆ ಪರ್ವತಾಕಾರವಾಗಿಯೂ ಹುಲಿ ಕರಡಿಗಳಂತೆ ಮುಖಗಳುಳ್ಳವಾಗಿಯೂ, ಪಂಚಮುಖ, ದಶಮುಖ, ಶತಮುಖ, ಸಹಸ್ರ ಮುಖಗಳಿಂದ ಯುಕ್ತವಾದ ದೊಡ್ಡ ದೊಡ್ಡ ಹಾವುಗಳೂ ಬ್ರಾಹ್ಮಣರ ಮಂತ್ರಸಾಮರ್ಥ್ಯದಿಂದ ಹೋಮಕುಂಡದಲ್ಲಿ ಬಿದ್ದು ಆಹುತಿಯಾಗುತ್ತಿದ್ದವು.



ಈ ಪ್ರಕಾರ ಯಜ್ಞಕುಂಡದಲ್ಲಿ ಅಸಂಖ್ಯ ಸರ್ಪಗಳು ಧಡಧಡನೆ ಬಿದ್ದು ಆಹುತಿ ಯಾಗುತ್ತಿರಲು; ಅದರ ದುರ್ಗಂಧವು ಆಕಾಶವನ್ನು ವ್ಯಾಪಿಸಿತು. ಎಷ್ಟು ಸರ್ಪಗಳು ಮೃತವಾದವೆಂದು ಎಣಿಸಿ ಹೇಳುವದಕ್ಕೆ ಸಹಸ್ರವದನನಾದ ಆದಿಶೇಷನಿಗೂ ಕೂಡಾ

ಅಸಾಧ್ಯವು. ಆಗ ಬ್ರಾಹ್ಮಣರು—“ಜನಮೇಜಯರಾಜನೇ ತ್ರಿಲೋಕದಲ್ಲಿ ನೀನು ಮಹಾಪ್ರತಾಪಶಾಲಿ” ಯೆಂದು ಅವನನ್ನು ಹೊಗಳಹತ್ತಿದರು. ಆ ಮೇಲೆ ಜನಮೇಜಯ ರಾಜನು—“ಋಷಿಗಳಿರಾ, ಇನ್ನು ಮೇಲೆ ನನ್ನ ಪಿತನನ್ನು ಮೃತಿಗೊಳಿಸಿದ ತಕ್ಷಕನನ್ನು ಆವಾಹನವನ್ನು ಮಾಡಿರಿ” ಎಂದು ಹೇಳಲು, ಆಗಲವರು ತಕ್ಷಕನ ನಾಮರೂಪಗಳನ್ನು ಸ್ಮರಿಸಿ ಮಂತ್ರದಿಂದ ಆಕರ್ಷಣವನ್ನು ಮಾಡಿ ಅವದಾನವನ್ನು ಕೊಡಬೇಕೆಂಬುವಷ್ಟರಲ್ಲಿ ನಾಗಲೋಕದೊಳಗೆ ಅವನಿಗೆ ಮರಣ ಚಿನ್ಹಗಳು ಪ್ರತ್ಯಕ್ಷವಾಗಿ ತೋರಹತ್ತಿದವು. ಆಗಲಾ ತಕ್ಷಕನು—“ಅಯ್ಯೋ! ನನಗೆ ಮರಣಕಾಲವು ಪ್ರಾಪ್ತವಾಯಿತು. ಇನ್ನು ಹೇಗೆ ಮಾಡಲಿ? ಯಾರ ಮರೆ ಬಿದ್ದರೆ ನನನ್ನು ರಕ್ಷಿಸುವರು?” ಎಂದು ಆಲೋಚಿಸಿ, ವಾಯುವೇಗದಿಂದ ಸ್ವರ್ಗಲೋಕಕ್ಕೆ ಹೋಗಿ ದೇವೇಂದ್ರನ ಪಾದಗಳನ್ನು ಘಟ್ಟಿಯಾಗಿ ಹಿಡಿದು ರೋದನ ಮಾಡುತ್ತ—“ಸಹಸ್ರಾಕ್ಷನೇ, ನಿನಗೆ ಶರಣಾಗತನಾಗಿದ್ದೇನೆ. ನನ್ನನ್ನು ರಕ್ಷಿಸು, ರಕ್ಷಿಸು” ಎಂದು ಹಸ್ತಗಳನ್ನು ಜೋಡಿಸಿ ಬೇಡಿಕೊಂಡಿದ್ದೇನಂದರೆ—“ಶಚಿಪತಿಯೇ, ನನ್ನ ಅವಸ್ಥೆಯನ್ನು ಎಷ್ಟಂತ ಹೇಳಲಿ? ಜನಮೇಜಯರಾಜನು ಸರ್ಪ ಯಾಗವನ್ನು ನಡೆಸಿ ನಮ್ಮ ಸರ್ಪಕುಲವನ್ನು ಹುರಿದುಬಿಟ್ಟನು. ಇದೀಗ ನನ್ನ ಸರ್ತಿಯು ಬಂದಿರುವದು. ಹೇಗಾದರೂ ಮಾಡಿ ನನ್ನನ್ನು ರಕ್ಷಿಸಬೇಕೆಂ” ದು ಬೇಡಿಕೊಳ್ಳಲು, ಅದಕ್ಕೆ ದೇವೇಂದ್ರನು ಕೋಪದಿಂದ—“ಪರಮ ಚಾಂಡಾಲನೇ, ದುರ್ಜನನೇ. ಅನ್ಯಾಯ ವಾಗಿ ಪರೀಕ್ಷಿತನಿಗೆ ಕಡಿದು ಸಂಹಾರ ಮಾಡುವ ಕಾಲಕ್ಕೆ ನಿನಗೆ ಸ್ವಲ್ಪಾದರೂ ಅಂತಃ ಕರುಣವು ಪ್ರಾಪ್ತವಾಯಿತೇ? ಇಂತಿಹ ಅನ್ಯಾಯವನ್ನು ಮಾಡಿ ಈಗ ಮಃಖಪಟ್ಟರೆ ಯಾರೇನು ಮಾಡುವರು?” ಎಂದು ಬೆದರಿಸಿ ಬಿಡಲು, ಅದಕ್ಕೆ ತಕ್ಷಕನು—“ನಾವು ಉಭಯತರು ಕಶ್ಯಪಋಷಿಯ ಮಕ್ಕಳಲ್ಲವೇ? ಆದ್ದರಿಂದ ಅಣ್ಣಾ, ಈ ಕಾಲದಲ್ಲಿ ನಿನ್ನ ಹೊರ್ತು ನನಗೆ ರಕ್ಷಕರು ಯಾರಿರುವರು?” ಎಂದು ದೈನ್ಯೋಕ್ತಿಯಿಂದ ಹೇಳಿಕೊಳ್ಳಲು ದೇವೇಂದ್ರನು ನಿರ್ವಾಹವಿಲ್ಲದೆ ಆ ತಕ್ಷಕನನ್ನು ತನ್ನ ಬೆನ್ನಿಗ ಹಾಕಿಕೊಂಡನು.

ಇತ್ತ ನಾಗಲೋಕದಲ್ಲಿ ವಾಸುಕಿಯೂ, ಶೇಷನೂ ಕೂಡಿಕೊಂಡು ಬಹಳೇ ಚಿಂತೆಯನ್ನು ಮಾಡುತ್ತ—“ಒಬ್ಬ ದುಷ್ಟ ತಕ್ಷಕನಿಂದಲೂ, ನಮ್ಮ ಕದ್ರುಮಾತೆಯ ಶಾಪ ದಿಂದಲೂ, ಉತ್ತಂಕಋಷಿಯ ಕೋಪದಿಂದಲೂ ನಮ್ಮ ಸರ್ಪಕುಲವೇ ನಾಶವಾಗುವ ಹೊತ್ತು ಬಂದೊದಗಿತಲ್ಲ? ಇದಕ್ಕೆ ಹೇಗೆ ಮಾಡೋಣ?” ಎಂದು ಆಲೋಚಿಸಿ, ವಾಸು ಕಿಯು ತನ್ನ ತಂಗಿಯಾದ ಜರತ್ಕಾರೆಯ ಬಳಿಗೆ ಹೋಗಿ—“ಜನಮೇಜಯರಾಜನು ಈಗ ಸರ್ಪಯಾಗವನ್ನು ನಡೆಸಿರುವನು. ಅದರಲ್ಲಿ ನಮ್ಮ ವಂಶವೇ ನಿರ್ಮೂಲವಾಗುವ ಹೊತ್ತು ಬಂದೊದಗಿತು. ಈ ವೇಳೆಯಲ್ಲಿ ನಿನ್ನ ಪುತ್ರನೇ ನಮ್ಮನ್ನು ರಕ್ಷಿಸಬೇಕಲ್ಲದೆ ಬೇರೊಬ್ಬರಿಂದ ಈ ಕಾರ್ಯವು ಆಗುವದಿಲ್ಲ” ಎಂದು ಬೇಡಿಕೊಳ್ಳಲು, ಕೂಡಲೆ ಅವಳು ಅನುಷ್ಠಾನವನ್ನು ಮಾಡುತ್ತಿರುವ ತನ್ನ ಮಗನಾದ ಆಸ್ತೀಕನ ಬಳಿಗೆ ಹೋಗಿ—

"ಪುತ್ರನೇ ಜನಮೇಜಯರಾಜನ ಸರ್ಪಯಾಗದಲ್ಲಿ ಸರ್ಪಕುಲವು ಸಂಹಾರವಾಗುತ್ತಿರುವದು; ನಮ್ಮ ಬಂಧುಗಳಾದ ಅವರನ್ನು ನೀನೇ ರಕ್ಷಿಸಬೇಕೆಂಬ ನೇಮವಿರುವದರಿಂದ ಈಗಲೇ ನಿನ್ನ ಅನುಷ್ಠಾನವನ್ನು ಬಿಟ್ಟು ಅವರನ್ನು ರಕ್ಷಿಸು" ಎಂದು ಹೇಳುತ್ತಿರಲು, ಉಳಿದ ಸರ್ಪಗಳಿಂದ ಸಹಿತರಾದ ಶೇಷ-ವಾಸುಕಿಯರು ಆಸ್ತೀಕನಿಗೆ ಶರಣಾಗತರಾಗಿ ಬೇಡಿಕೊಂಡರು. ಆಗಲವನಿಗೆ ಅಂತಃಕರುಣ ಹುಟ್ಟಿ ಕೂಡಲೇ ಸರ್ಪಕುಲವನ್ನು ರಕ್ಷಿಸುವದಕ್ಕಾಗಿ ಜನಮೇಜಯರಾಜನು ಮಾಡುತ್ತಿರುವ ಯಜ್ಞಸತ್ರಕ್ಕೆ ಮನೋವೇಗದಿಂದ ಬರುತ್ತಿರಲು, ಉದಯ ಮಾರ್ತಾಂಡನಂತೆ ಪ್ರಕಾಶಿಸುತ್ತಿರುವ ಅವನ ತೇಜಸ್ಸನ್ನು ನೋಡಿದ ಕೂಡಲೇ ದ್ವಾರರಕ್ಷಕರು ನಿರ್ಬಂಧವನ್ನು ಮಾಡುವದಕ್ಕೆ ಹೆದರಿ ಹಿಂದಕ್ಕೆ ಸರಿದರು. ಆಗ ಆಸ್ತೀಕಮುನಿಯು ಬಲಿರಾಜನ ಯಜ್ಞಮಂಟಪದಲ್ಲಿ ವಾಮನಮೂರ್ತಿಯು ಪ್ರವೇಶ ಮಾಡಿದಂತೆ ಜನಮೇಜಯರಾಜನ ಯಾಗಮಂಟಪದೊಳಗೆ ನಿರ್ಭಯದಿಂದ ಹೊಕ್ಕು ರಾಜನಿಗೆ ಸ್ತುತಿಪೂರ್ವಕವಾಗಿ ತನ್ನ ಕೈಯನ್ನೆತ್ತಿ ಉಚ್ಚಸ್ವರದಿಂದ ಆಶೀರ್ವಾದವನ್ನು ಮಾಡುತ್ತಿರಲು, ಅಲ್ಲಿರುವ ಸರ್ವ ಋಷಿಗಳು ತಟಸ್ಥರಾಗಿ ಅವನನ್ನೇ ನೋಡಹತ್ತಿದರು. ಆಗಲವನು—"ಯಜ್ಞನಾರಾಯಣಾ, ನಿನಗೆ ನಮಸ್ಕಾರವು; ಸಕಲ ಬ್ರಹ್ಮವೃಂದವೇ ನಿಮಗೆ ನನ್ನ ಅರ್ಚನವು; ಋತ್ವಿಜರೇ, ನಿಮ್ಮ ಮಂತ್ರಸಾಮರ್ಥ್ಯವು ಈ ಜಗತ್ತಿನಲ್ಲಿ ಅಗಾಧವಾದದ್ದು" ಎಂದು ಅವರ ಮುಖಸ್ತುತಿಯನ್ನು ಮಾಡಿ, ರಾಜನ ಕಡೆಗೆ ನೋಡಿ— "ಎಲೈ ಜನಮೇಜಯರಾಜನೇ, ಕುರುಪಾಂಡವ ಕುಲವರ್ಯನೇ, ನಿನಗೆ ನನ್ನ ಆಶೀರ್ವಾದವು. ಮಹಾರಾಜನೇ, ನಿನಗೆ ತುಷ್ಟಿಯೂ, ಪುಷ್ಟಿಯೂ, ಪೂರ್ಣವಾದ ಐಶ್ವರ್ಯವೂ, ಶಾಂತಿಯೂ, ಕ್ಷಮೆಯೂ, ಶ್ರೀವಿಷ್ಣು ಪೂಜನವೂ, ಆಯುಷ್ಯವೂ ಅಭಿವೃದ್ಧಿಯನ್ನು ಹೊಂದಲಿ; ಮತ್ತು ನೀನು ಮಾಡುತ್ತಿರುವ ಯಜ್ಞಕೀರ್ತಿಯೂ, ಔದಾರ್ಯವೂ, ಸದಸದ್ವಿವೇಕ ಬುದ್ಧಿಯೂ, ಸಮಾಧಾನ ಗುಣವೂ, ಕ್ಷಮೆಯೂ ನಿನ್ನಲ್ಲಿ ಸರ್ವದಾ ವಾಸ ಮಾಡಿಕೊಂಡಿರಲಿ; ಇದಲ್ಲದೆ ನಿನ್ನ ನಿರ್ದೋಷವಾದ ಕೀರ್ತಿಯು ವಿಸ್ತಾರವಾಗಿ ನನ್ನ ವಾಂಛಿತಫಲವನ್ನು ಸಂಪೂರ್ಣ ಮಾಡಲಿ" ಎಂದು ಆಸ್ತೀಕಮುನಿಯು ತನ್ನ ಅಸ್ಖಲಿತವಾದ ವಾಣಿಯಿಂದ ರಾಜನ ಮತ್ತು ಸಮಸ್ತ ಬ್ರಾಹ್ಮಣರ ಸ್ತುತಿಯನ್ನು ಮಾಡುತ್ತಿರಲು, ಯಜ್ಞಮಂಟಪದಲ್ಲಿರುವ ಸಕಲ ಋಷಿಗಳು ಆನಂದಭರಿತರಾಗಿ ಆ ಆನಂದದ ಭರದಲ್ಲಿ "ತಥಾಸ್ತು, ತಥಾಸ್ತು, ತಥಾಸ್ತು" ಎಂದು ನುಡಿದರು.

ಪುನಃ ಆಸ್ತೀಕನು —"ಮಹಾರಾಜನೇ, ಪೂರ್ವದಲ್ಲಿ ಅನೇಕ ಯಜ್ಞಗಳು ಆಗಿ ಹೋದವು; ಅದರಲ್ಲಿ ಈಗ ಮಾಡಿದ ನಿನ್ನ ಯಜ್ಞದಲ್ಲಿ ಏನೂ ವ್ಯಂಗವಿಲ್ಲದೆ ಅಗ್ನಿನಾರಾಯಣನು ಬಹಳೇ ತೃಪ್ತಿಯನ್ನು ಹೊಂದಿದನು. ಧನ್ಯ! ಧನ್ಯ!! ರಾಜೇಂದ್ರನೇ, ನಿನ್ನ ಜನ್ಮವನ್ನು ಸಾರ್ಥಕ ಮಾಡಿಕೊಂಡೆ. ನೀನು ಬುದ್ಧಿಯಲ್ಲಿ ಬ್ರಹಸ್ಪತಿಯಂತೆ, ತೇಜಸ್ಸಿನಲ್ಲಿ ಸೂರ್ಯನಂತೆ, ಪವಿತ್ರತೆಯಲ್ಲಿ ಅಗ್ನಿನಾರಾಯಣನಂತೆ, ರಾಜ್ಯರಕ್ಷಣದಲ್ಲಿ ಪ್ರತ್ಯಕ್ಷ

ಶ್ರೀವಿಷ್ಣುವಿನಂತೆ, ಐಶ್ವರ್ಯದಲ್ಲಿ ಕುಬೇರನಂತೆ, ಸಭಾಸ್ಥಾನದಲ್ಲಿ ದೇವೇಂದ್ರನಂತೆ, ಧನು ರ್ವಿದ್ಯೆದಲ್ಲಿ ಭಾರ್ಗವನಂತೆ, ಬಲದಲ್ಲಿ ಭೀಮನಂತೆ ವಿರಾಜಿಸುತ್ತಿರುವೆ. ನೀನು ಇನ್ನೂ ಬಾಲಕನಾಗಿದ್ದರೂ ಸರ್ವಲೋಕಗಳಲ್ಲಿಯೂ ನಿನ್ನ ಕೀರ್ತಿಯು ವಿಸ್ತಾರವಾಗಿರುವದು" ಎಂದು ಮಹಾರಾಜನ ಸ್ತುತಿಯನ್ನು ಮಾಡಿದನು.

ಹೀಗೆ ಆಸ್ತೀಕಮುನಿಯು ತನ್ನ ಗುಣವರ್ಣನೆಯನ್ನು ಮಾಡಿದ್ದು ಕೇಳಿ ಜನಮೇ ಜಯರಾಜನು ಉಬ್ಬಿ ಸಂತೋಷದ ಭರದಿಂದ ತನ್ನ ಮನಸ್ಸಿನಲ್ಲಿ—"ಈ ಯಜ್ಞಮಂಟಪ ದಲ್ಲಿ ಇಂತಿಹ ತೇಜಸ್ವಿಯಾದ ಋಷಿಗಳು ಬಂದಿದ್ದು ನನ್ನ ಭಾಗ್ಯೋದಯವೆಂದು ತಿಳಿಯು ತ್ತೇನೆ. ಈಗ ತಕ್ಷಕನ ಆಹುತಿಯಾದನಂತರ ಇವರ ವಾಂಛಿತಾರ್ಥವನ್ನು ಪೂರ್ಣ ಮಾಡಬೇಕು" ಎಂದು ನಿಶ್ಚಯಿಸಿ ಆಸ್ತೀಕನಿಗೆ ಅಂದದ್ದೇನಂದರೆ—"ಸ್ವಾಮಿನ್, ಈ ಕನಕಾಸನದಲ್ಲಿ ಒಂದು ಕ್ಷಣಹೊತ್ತು ವಿಶ್ರಮಿಸಬೇಕು" ಎಂದು ಹೇಳಲು, ಅದಕ್ಕೆ ಆಸ್ತೀಕನು—"ಮಹಾರಾಜನೇ, ನಾನು ಮನಸ್ಸಿನಲ್ಲಿ ಒಂದು ವಾಂಛಿತಾರ್ಥವನ್ನು ಬಯಸಿ ನಿನ್ನಲ್ಲಿಗೆ ಬಂದಿರುವೆನು. ಅದನ್ನು ಪೂರ್ಣ ಮಾಡುವೆನೆಂದು ನೀನು ವಚನ ಕೊಟ್ಟರೆ ನಾನು ವಿಶ್ರಮಿಸುವೆನು" ಎಂದು ಹೇಳಲು, ಅದಕ್ಕೆ ಬ್ರಾಹ್ಮಣರೆಲ್ಲರು— "ಮಹಾರಾಜನೇ, ಇವರ ಇಚ್ಛೆಯನ್ನು ಪೂರ್ಣ ಮಾಡುವೆನೆಂದು ವಚನವನ್ನು ಕೊಟ್ಟು ಇವರನ್ನು ಕೂಡ್ರಿಸುವದಕ್ಕೆ ಪ್ರತಿಬಂಧಕವೇನು? ಅಗತ್ಯವಾಗಿ ಕೂಡ್ರಿಸು" ಎಂದು ಹೇಳಲು, ಆಗ ಜನಮೇಜಯರಾಜನು—"ವಿಪ್ರರೇ, ಮೊದಲು ನನ್ನ ಪಿತನನು ಭಕ್ಷಣ ಮಾಡಿದ ತಕ್ಷಕನನ್ನು ಸುಟ್ಟು ರಕ್ಷೆ ಮಾಡಿದ ನಂತರ ಈ ಋಷಿಗಳಿಗೆ ರತ್ನರಾಶಿಯನ್ನೇ ತಂದು ಅಭಿಷೇಕ ಮಾಡುವೆನು; ಇದಲ್ಲದೆ ನನ್ನ ತನುಮನಧನಗಳನ್ನು ಸಹ ಅರ್ಪಿಸಿ ಇವರು ಬೇಡಿದ್ದನ್ನು ಕೊಡುವೆನು" ಎಂದು ಬ್ರಾಹ್ಮಣರಿಗೆ ಹೇಳಲಾಗಿ ಅಂತರ್ಜ್ಞಾನಿ ಗಳಾದ ಬ್ರಾಹ್ಮಣರು—"ಮಹಾರಾಜನೇ, ಇನ್ನೆಲ್ಲೀ ತಕ್ಷಕನು? ಸಹಸ್ರಾಕ್ಷನಾದ ಅಮ ರೇಂದ್ರನು ಅವನ ರಕ್ಷಕನಾಗಿ ರಕ್ಷಿಸುವೆನೆಂದು ಅಭಯವನ್ನು ಕೊಟ್ಟಿರುವನು" ಎಂದು ಹೇಳಲು, ಜನಮೇಜಯನು ಕ್ರೋಧಾವೇಶದಿಂದ—"ಏನು? ನನ್ನ ತಂದೆಯನ್ನು ಭಕ್ಷಿ ಸಿದ ತಕ್ಷಕನಿಗೆ ಸಹಸ್ರಾಕ್ಷನು ಅವನಿಗೆ ಅಭಯವನ್ನು ಕೊಟ್ಟು ರಕ್ಷಿಸುವನೇ? ಆ ದೇವೇಂದ್ರನನ್ನು ಸಹಿತವಾಗಿ ತಕ್ಷಕನನ್ನು ಆಹುತಿಯಾಗಿ ಕೊಟ್ಟು ಬಿಡಿರಿ" ಎಂದು ಹೇಳಲು, ಆಗ ಬ್ರಾಹ್ಮಣರು—"ಇಂದ್ರಾಯ ತಕ್ಷಕಾಯ ಸ್ವಾಹಾ" ಎಂದು ಮಂತ್ರೋ ಚ್ಚಾರವನ್ನು ಮಾಡಿ, ಆ ಕ್ಷಣದಲ್ಲಿಯೇ ಸಿಂಹಾಸನದಿಂದ ಸಹಿತನಾದ ದೇವೇಂದ್ರನನ್ನು ಸ್ವರ್ಗದಿಂದ ಕೆಳಗೆ ಇಳಿಸುತ್ತಿರಲು, ಆಸ್ತೀಕನು ಅದನ್ನು ನೋಡಿ ತನ್ನ ತಪಃಸಾಮರ್ಥ್ಯ ದಿಂದ ಅವನನ್ನು ಅಂತರಿಕ್ಷದಲ್ಲಿಯೇ ನಿಲ್ಲಿಸಿ ಬಿಟ್ಟನು. ಅಂತಿಹ ಆಸ್ತೀಕನ ತಪೋಬಲ ವನ್ನು ನೋಡಿ ಯಜ್ಞಮಂಟಪದಲ್ಲಿರುವ ಸಮಸ್ತರಾದ ಬ್ರಾಹ್ಮಣರು ಆಶ್ಚರ್ಯಪಟ್ಟು ರಾಜನಿಗೆ—"ಮಹಾರಾಜನೇ, ಈ ಆಸ್ತೀಕನು ತಪೋಬಲದಿಂದ ಮಹಾ ಪ್ರತಾಪಶಾಲಿ

ಯನಾಗಿರುವನು; ಇವನ ಇಚ್ಛಿತಾರ್ಥವನ್ನು ಪೂರ್ಣ ಮಾಡಿದ ಹೊರ್ತು ನಿನ್ನ ಯಜ್ಞವು ಸಿದ್ಧಿಯನ್ನು ಹೊಂದಲಾರದು. ಆದರಿಂದ ಬೇಗನೆ "ನಿಮ್ಮ ಇಚ್ಛೆಯನ್ನು ಪೂರ್ಣ ಮಾಡುತ್ತೇನೆಂದು ವಚನವನ್ನು ಕೊಟ್ಟು ಇವರನ್ನು ಶಾಂತ ಮಾಡು" ಎಂದು ಹೇಳಲು, ಜನಮೇಜಯರಾಜನು ಅದರಂತೆ ವಚನವನ್ನು ಕೊಟ್ಟು ಆಸ್ತೀಕನನ್ನು ಕನಕಾಸನದಲ್ಲಿ ಕೂಡ್ರಿಸಿ ಪೂಜೆಯನ್ನು ಮಾಡಿ ಅವರನ್ನು ಸಮಾಧಾನಗೊಳಿಸಿದನು.

ಆಸ್ತೀಕನು ತನ್ನ ತಪೋಬಲದಿಂದ ದೇವೇಂದ್ರನನ್ನು ಅಂತರಿಕ್ಷದಲ್ಲಿ ನಿಲ್ಲಿಸಿ ರಕ್ಷಿಸುತ್ತಿದ್ದನೆಂದು ಹಿಂದೆ ಹೇಳಿದ್ದೇವೆ. ಆ ದೇವೇಂದ್ರನ ಸಂಗಡಲೇ ತಕ್ಷಕನು ಬ್ರಾಹ್ಮಣರ ಮಂತ್ರಬಲದಿಂದಲೇ ಅಂತರಿಕ್ಷದಲ್ಲಿ ಅಲಾತಚಕ್ರದಂತೆ ಗರಗರ ತಿರುಗಹತ್ತಿ ಸಾಯುತ್ತೇನೆಂಬ ಸಂಕಟದಿಂದ ಭಯಂಕರವಾದ ದುಧುಃಕಾರವನ್ನು ಮಾಡುತ್ತ ಬಾಲವು ಮೇಲಕ್ಕಾಗಿ ತಲೆ ಕೆಳಗಾಗಲು ಇನ್ನು ಮೇಲೆ ಅಗ್ನಿಕುಂಡದಲ್ಲಿ ಬೀಳುವ ಸಮಯವು ಪ್ರಾಪ್ತವಾಯಿತು. ಆ ವೇಳೆಯಲ್ಲಿ ಆಸ್ತೀಕನು ಆ ತಕ್ಷಕನ ಸಂಕಟವನ್ನು ನೋಡಲಾರದೆ ತನ್ನ ಕಮಂಡಲದಲ್ಲಿರುವ ನೀರನ್ನು ಕೈಯ್ಯಲ್ಲಿ ತೆಗೆದುಕೊಂಡು ಅಭಿಮಂತ್ರಿಸಿ—"ತಕ್ಷಕನೇ, ಹಾಗೇ ಅಂತರಿಕ್ಷವಲ್ಲಿ ಸ್ವಸ್ಥವಾಗಿ ನಿಂತಿರು" ಎಂದು ಉದಕವನ್ನು ಪ್ರೋಕ್ಷಿಸಲು, ಆಸ್ತೀಕನ ಮಂತ್ರಬಲದಿಂದ ಆ ತಕ್ಷಕನು ಅಂತರಿಕ್ಷದಲ್ಲಿ ಸ್ವಸ್ಥವಾಗಿ ನಿಂತುಬಿಟ್ಟನು. ಬ್ರಾಹ್ಮಣನ ಈ ಮಹಿಮೆಯನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾಗಿ—"ಮಹಾರಾಜನೇ, ಮೊದಲು ಆ ಬ್ರಾಹ್ಮಣನ ಸನ್ಮಾನವನ್ನು ಮಾಡಿ ಅವನ ಅಪೇಕ್ಷಿತ ವಸ್ತುವನ್ನು ಕೊಡು" ಎಂದು ನಿರ್ಭಿಡೆಯಿಂದ ಹೇಳಲು, ಆಗ ರಾಜನು "ಋಷಿವರ್ಯರೇ, ನಾನು ಪ್ರಸನ್ನನಾಗಿರುವೆನು, ತಮ್ಮ ಅಪೇಕ್ಷೆಯು ಏನಿರುವದು ಹೇಳಿರಿ; ಅದನ್ನ ಪೂರ್ಣ ಮಾಡುವೆನು" ಎಂದು ವಚನವನ್ನು ಕೊಡಲು, ಆಸ್ತೀಕನು ಸಂತೋಷದಿಂದ—"ಹಾಗಾದರೆ ಈ ನಿನ್ನ ಯಜ್ಞವನ್ನು ಇಷ್ಟಕ್ಕೇ ಪೂರ್ಣ ಮಾಡಿ, ಸರ್ಪಗಳ ಸಂಹಾರ ಮಾಡುವದನ್ನು ಬಿಟ್ಟುಬಿಡು; ಇದೇ ನನ್ನ ಅಪೇಕ್ಷೆಯು. ಇದನ್ನು ಪೂರ್ಣ ಮಾಡಬೇಕು" ಎಂದು ಬೇಡಿಕೊಳ್ಳಲು, ಜನಮೇಜಯರಾಜನು ವ್ಯಗ್ರವಾದ ಮನಸ್ಸುಳ್ಳವನಾಗಿ—"ತಪೋಧನರೇ, ಆ ನನ್ನ ವೈರಿಯಾದ ತಕ್ಷಕನೊಬ್ಬನನ್ನು ಬಿಟ್ಟು, ನನ್ನ ಸರ್ವ ರಾಜ್ಯವನ್ನೇ ನಿಮಗೆ ಸಮರ್ಪಣ ಮಾಡುವೆನು; ದಯಮಾಡಿ ನನ್ನ ಯಾಗಖಂಡನವನ್ನು ಮಾಡಬಾರದು. ನಿಮಗೆ ಸಹಸ್ರ ವಂದನೆಗಳನ್ನು ಮಾಡುತ್ತೇನೆ" ಎಂದು ಬೇಡಿಕೊಳ್ಳಲು, ಆಸ್ತೀಕನು—"ಮಹಾರಾಜನೇ, ನೀನು ಪುಣ್ಯವಂತರಲ್ಲಿ ಶ್ರೇಷ್ಠನಾದವನು. ಹೀಗಿದ್ದು, ಮಾತು ಕೊಟ್ಟು ಬದಲು ಮಾತುಗಳನ್ನಾಡುವರೇ? ಸರ್ಪಗಳಿಗೆ ಮಾತ್ರ ಎರಡು ನಾಲಿಗೆಗಳಿರುವವು; ನಿನಗೆ ಒಂದೇ ನಾಲಿಗೆಯು ಇರುವದಲ್ಲವೇ? ಅಂದ ಮೇಲೆ ಸತ್ವಶೀಲನೇ, ನಿನ್ನ ವಾಣಿಯು ಸರ್ವಥಾ ಅಸತ್ಯವಾಗಬಾರದು. ಹಿಂದಕ್ಕೆ ಸತ್ವಶಾಲಿಯಾದ ಹರಿಶ್ಚಂದ್ರನು ತಾನು ಕೊಟ್ಟ ವಚನವನ್ನು ಪಾಲಿಸುವದಕ್ಕಾಗಿ ತನ್ನ ದೇಹವನ್ನೇ ವಿಕ್ರಯ ಮಾಡಿಕೊಳ್ಳಲಿಲ್ಲವೇ?

ಪಾಂಡವರು ತಮ್ಮ ಸತ್ವರಕ್ಷಣಕ್ಕಾಗಿ ರಾಜ್ಯಭೋಗಗಳನ್ನು ಬಿಟ್ಟು ವನವಾಸವನ್ನು ಮಾಡ ಲಿಲ್ಲವೇ? ಮತ್ತು ಶ್ರೀಯಾಳನು ತನ್ನ ವಚನವನ್ನು ಸತ್ಯ ಮಾಡಿಕೊಳ್ಳುವದಕ್ಕಾಗಿ ಪ್ರತ್ಯಕ್ಷ ತನ್ನ ಮಗನ ಪ್ರಾಣವನ್ನು ಕೊಡಲಿಲ್ಲವೇ? ಅದ ಕಾರಣ ನೀನು ಕೊಟ್ಟ ವಚನವನ್ನು ಪರಿಪಾಲಿಸು. ಇದನ್ನು ಬಿಟ್ಟು ಬೇರೆ ಯಾವವನ್ನೂ ಬೇಡುವದಿಲ್ಲ. ಒಂದು ವೇಳೆ ಬೇಡಿದರೆ ನನಗೆ ನರಕವು ಪ್ರಾಪ್ತವಾಗಲಿ" ಎಂದು ಹೇಳಿದನು.

ಹೀಗೆ ಜರತ್ಕಾರನಂದನನು ಎಷ್ಟೋ ಉದಾಹರಣೆಗಳನ್ನು ಕೊಟ್ಟು ಹೇಳಿದರೂ ರಾಜನು ತನ್ನ ಅಸಂತುಷ್ಟತೆಯನ್ನು ಬಿಡಲಿಲ್ಲ. ಇತ್ತ ಬ್ರಾಹ್ಮಣರು ಭ್ರೂಸಂಕೇತವನ್ನು ಮಾಡಿ ರಾಜನನ್ನು ಸುಮ್ಮನಿರಿಸಿ ತಕ್ಷಕನನ್ನು ಪುನಃ ತಮ್ಮ ಮಂತ್ರಬಲದಿಂದ ಆಕರ್ಷಿಸು ತ್ತಿರಲು ಆಸ್ತೀಕನು ಮತ್ತೆ ತನ್ನ ಮಂತ್ರಬಲದಿಂದ ಅವನನ್ನು ನಿಲ್ಲಿಸಿ ಬಿಟ್ಟನು. ಹೀಗೆ ಆಸ್ತೀಕನ ಮಂತ್ರಸಾಮರ್ಥ್ಯವು ಹೆಚ್ಚಾದದ್ದರಿಂದ ಬ್ರಾಹ್ಮಣರು ಬೇಸತ್ತು ಸ್ಪಷ್ಟವಾಗಿ ಹೇಳಿದ್ದೇನಂದರೆ—"ರಾಜನೇ, ಇನ್ನು ಮೇಲೆ ಹೆಚ್ಚಿಗೆ ಆಗ್ರಹವನ್ನು ಮಾಡಬೇಡ; ಆಸ್ತೀಕನಿಗೆ ಕೊಟ್ಟ ಭಾಷೆಯನ್ನು ಪೂರ್ಣ ಮಾಡು. ನೀನು ಶಪಥವನ್ನು ಮಾಡಿದ ಪ್ರಕಾರ ಅಸಂಖ್ಯ ಸರ್ಪಗಳನ್ನು ಸಂಹಾರ ಮಾಡಿ ಜಗತ್ತಿನಲ್ಲಿ ಕೀರ್ತಿಯನ್ನು ಹೊಂದಿದೆ. ನಿನ ಯಾಗವು ಅಪೂರ್ಣವಾಯಿತೆಂಬ ವಿಷಾದವನ್ನು ಮನಸ್ಸಿನಲ್ಲಿ ಹಚ್ಚಿಕೊಳ್ಳಬೇಡ. ಆ ಬ್ರಾಹ್ಮಣನ ಇಚ್ಛೆಯನ್ನು ಪೂರ್ಣ ಮಾಡಿದರೆ ನಿನ್ನ ಯಜ್ಞವು ಪೂರ್ಣವಾಯಿತೆಂದು ತಿಳಿ" ಎಂದು ಹೇಳಲು, ಜನಮೇಜಯರಾಜನು ಮನಸ್ಸಿನಲ್ಲಿ ಸಮಾಧಾನವನ್ನು ಹೊಂದಿ—"ಬ್ರಾಹ್ಮಣರೇ, ನಿಮ್ಮ ಆಜ್ಞೆಯೇ ನನಗೆ ಮಾನ್ಯವು" ಎಂದು ಹೇಳಿ, ಆಸ್ತೀಕ ಮುನಿಗೆ ಹೇಳಿದ್ದೇನಂದರೆ—"ಮಹನ್, ತಮ್ಮ ಇಚ್ಛೆಯಂತೆ ಯಜ್ಞವನ್ನು ಸಂಪೂರ್ಣ ಮಾಡಿ ದೆನು" ಎಂದು ಹೇಳಿ ಸರ್ಪಗಳ ಸಂಹಾರ ಮಾಡುವನನ್ನು ನಿಲ್ಲಿಸಿ ಬಿಟ್ಟನು. ಆಗ ಆಸ್ತೀಕನು ಜಯಜಯಕಾರವನ್ನು ಮಾಡಲು, ಸರ್ವರೂ ಸಂತೋಷಭರಿತರಾದರು. ತಕ್ಷಕನು ಮುಕ್ತನಾದನು. ಆಗ ಜನಮೇಜಯರಾಜನು ಋತ್ವಿಜ ಮೊದಲಾದ ಎಲ್ಲ ಬ್ರಾಹ್ಮಣರಿಗೂ ಧನಮಾನಗಳನ್ನು ಕೊಟ್ಟು ತೃಪ್ತಿಗೊಳಿಸಿ, ಆಸ್ತೀಕ ಮುನಿಗಳಿಗೆ ವಸ್ತ್ರಾ ಲಂಕಾರಗಳನ್ನೂ ಅಪಾರ ದ್ರವ್ಯವನ್ನೂ ಕೊಟ್ಟು, ಸಂತೈಸಿ, ಸರ್ವರಿಗೂ ತಮ್ಮ ತಮ್ಮ ಸ್ಥಾನಗಳಿಗೆ ಹೋಗುವದಕ್ಕೆ ಅಪ್ಪಣೆಯನ್ನು ಕೊಟ್ಟು ಕಳಿಸಿದನು.

ಇತ್ತ ಆಸ್ತೀಕನು ಸ್ವಸ್ಥಾನಕ್ಕೆ ಬರಲು, ನಾಗಲೋಕದಲ್ಲಿ ಎಲ್ಲಿ ನೋಡಿದರೂ ಸರ್ಪಗಳಿಗೆ ಆನಂದವೇ ಆನಂದವಾಯಿತು. ಆಗ ಶೇಷ, ವಾಸುಕಿ, ತಕ್ಷಕ ಮೊದಲಾದ ಎಲ್ಲ ಸರ್ಪಗಳು ಕೂಡಿಕೊಂಡು ಬಂದು ಆಸ್ತೀಕನ ದರ್ಶನವನ್ನು ತೆಗೆದುಕೊಂಡು, ಕೈಗಳನ್ನು ಜೋಡಿಸಿ ಅಂದದ್ದೇನಂದರೆ—"ಮಹಾರಾಯನೇ, ನೀನು ಬಹು ಪುಣ್ಯವಂತನು. ನಿನ್ನ ಸ್ಮರಣಮಾತ್ರದಿಂದಲೇ ದೋಷಗಳು ದೂರಾಗುವವು. ನಮ್ಮೆಲ್ಲರ ಪ್ರಾಣಗಳನ್ನು ರಕ್ಷಿಸಿ ತ್ರಿಭುವನದಲ್ಲಿ ನೀನು ಕೀರ್ತಿಯನ್ನು ಹೊಂದಿದೆ. ನೀನೇ ಧನ್ಯನು" ಎಂದು

ಹೊಗಳಿ, ಎಲ್ಲ ಸರ್ಪಗಳು ಶಪಥವನ್ನು ಮಾಡಿ ಹೇಳಿದ್ದೇನಂದರೆ—“ಆಸ್ತೀಕನೇ, ನೀನು ಮಾಡಿದ ಮಹದುಪಕಾರವನ್ನು ಸ್ಮರಿಸಿ ಕೃತಜ್ಞರಾಗಿರುವೆವು; ಅದ್ದರಿಂದ ನಾವಾದರೂ ನಿನಗೆ ಅಖಂಡವಾದ ಬಹುಮಾನಪೂರ್ವಕ ವಚನಗಳನ್ನು ಕೊಡುವೆವು; —“ಯಾವ ಮನುಷ್ಯನು ನಿನ್ನ ಸ್ಮರಣೆಯನ್ನು ಮಾಡುವನೋ? ಅವನಿಗೆ ನಾವು ಎಂದಿಗೂ ಬಾಧೆಯನ್ನು ಮಾಡಲಿಕ್ಕಿಲ್ಲ. ಈ ವಚನವನ್ನು ನಾವು ಮೀರಿ ನಡೆದರೆ ನಮ್ಮ ತಲೆಯು ಸಹಸ್ರ ಹೋಳಾಗಲಿ; ಮತ್ತು ಈ ಆಸ್ತೀಕಾಖ್ಯಾನವನ್ನು ಯಾರು ಕೇಳುವರೋ? ಅಥವಾ ಯಾರು ಪಠನ ಮಾಡುವರೋ? ಅವರ ಸಮೀಪದಲ್ಲಿ ಸಹ ನಾವು ನಿಲ್ಲದೆ, ಭಯಭೀತರಾಗಿ ಓಡಿ ಹೋಗುವೆವು; ಮತ್ತು ನಿನ್ನ ಚರಿತ್ರ ಪುಸ್ತಕವು ಯಾರ ಗೃಹದಲ್ಲಿರುವದೋ? ಆ ಸ್ಥಳದಲ್ಲಿ ನಾವು ಎಂದಿಗೂ ಹೋಗಲಿಕ್ಕಿಲ್ಲ. ನಿನ್ನ ನಾಮಮಂತ್ರದಿಂದಲೇ ಸರ್ಪವಿಷವು ಇಳಿಯಲಿ. ಯಾವ ಸ್ಥಳದಲ್ಲಿ ನಿನ್ನ ನಾಮಸ್ಮರಣೆಯನ್ನು ಮಾಡುವರೋ? ಆ ಸ್ಥಳದಲ್ಲಿ ನಾವು ಬರುವದಿಲ್ಲ. ಕಾನನದಲ್ಲಿ ಯಾರಾದರೂ ಬರುವ ಕಾಲಕ್ಕೆ ನಮ್ಮ ಸಂಬಂಧವಾದ ಭೀತಿಯು ಉತ್ಪನ್ನವಾಗಲು, ಅವರು ನಿನ್ನ ನಾಮಸ್ಮರಣೆಯನ್ನು ಮಾಡಿದ ಕೂಡಲೆ ನಾವು ಅವರು ಬರುವ ಮಾರ್ಗವನ್ನು ಬಿಟ್ಟು ಹೊರಟು ಹೋಗುವೆವು. ನಮ್ಮ ಮೈಥುನವು ನಡೆದ ಕಾಲದಲ್ಲಿ ಯಾರಾದರೂ ನೋಡಿ ನಿನ್ನ ಸ್ಮರಣೆಯನ್ನು ಮಾಡಿದರೆ ನಾವು ಅವರ ಬೆನ್ನು ಹತ್ತುವದಿಲ್ಲ”. ಈ ಪ್ರಕಾರ ಶೇಷ, ವಾಸುಕಿ, ತಕ್ಷಕ ಮೊದಲು ಮಾಡಿಕೊಂಡು ಎಲ್ಲ ಸರ್ಪಗಳು ಆಸ್ತೀಕನಿಗೆ ಶಪಥಪೂರ್ವಕವಾಗಿ ಭಾಷೆಯನ್ನು ಕೊಟ್ಟವು. ಪ್ರತ್ಯಕ್ಷ ಶ್ರೀ ವೇದವ್ಯಾಸರು ಆಸ್ತೀಕನ ನಾಮಸ್ಮರಣೆಯನ್ನು ಮಾಡಿದರೆ ಸರ್ಪಬಾಧೆಯು ಎಂದಿಗೂ ಆಗುವದಿಲ್ಲೆಂದು ಬರೆದಿರುವರು. ಅಂದ ಮೇಲೆ ಈ ಮಾತು ಎಂದಾದರೂ ಅಸತ್ಯವಾಗುವದುಂಟೇ?

ವಾಚಕರೇ, ಹೀಗೆ ಸರ್ಪಗಳು ಮಾತೃಶಾಪದಿಂದ ವಿಮೋಚನವನ್ನು ಹೊಂದಿ, ಜನಮೇಜಯರಾಜನ ಸರ್ಪಯಾಗದಲ್ಲಿ ಆಸ್ತೀಕನಿಂದ ರಕ್ಷಿತವಾದವು. ಶ್ರೀಮನ್ಮಹಾಭಾರತದೊಳಗಿನ ಆದಿಪರ್ವದಲ್ಲಿ ಬರೆದ ಈ ಆಸ್ತೀಕಾಖ್ಯಾನವನ್ನು ನಿಮಗೆ ಹೇಳಿ ನಿಮ್ಮ ಅಪ್ಪಣೆಯನ್ನು ತೆಗೆದುಕೊಳ್ಳುವೆನು.

॥ ಶ್ರೀಕೃಷ್ಣಾರ್ಪಣಮಸ್ತು ॥

---

